# ಕೊರವಂಜಿ



ಜುಲೈ ೧೯೪೪

ಮಾಸ ಪತ್ರಿಕೆ

ಸಂಪಾದಕರು :
ಶ್ರೀ॥ ರಾ. ಶಿ.

ಚಿತ್ರಕಾರರು :
ಶ್ರೀ॥ ಆರ್. ಕೆ. ಲಕ್ಷ್ಮಣ್.

ಬರಹಗಾರರು :

ಶ್ರೀ॥ ನಾ. ಕ.
ಶ್ರೀ॥ ತ್ರಿ. ವಿ.
ಶ್ರೀ॥ ಪಾತಾಳಿ
ಶ್ರೀ॥ ಕಾರಂತ
ಶ್ರೀ॥ ಪಂಡಿತ್
ಶ್ರೀಮತಿ ಕೇಸರಿ
ಶ್ರೀ॥ ದೇಶಿರಾಜ

ಬಿಡಿ ಪತ್ರಿಕೆ -- ಕೇವಲ ಎರಡಾಣೆ

## ಶಿಷ್ಟ ನಗೆಯ ಮಾಸ ಪತ್ರಿಕೆ.

# ಕೊರವಂಜಿ

ಕೊರವಂಜಿಯು ತಿಳಿನಗೆಯ ಸಚಿತ್ರ ಮಾಸಪತ್ರಿಕೆ. ತಿಳಿಹಾಸ್ಯದ ಲೇಖನಗಳು, ಹರಟೆಗಳು, ಅಣಕವಾಡುಗಳು, ನಗೆ ಹಾಡುಗಳು ಇವುಗಳಿಗೆ ಸರ್ವದಾ ಸುಸ್ವಾಗತವುಂಟು. ಆದರೆ ವ್ಯಕ್ತಿಯನ್ನುದ್ದೇಶಿಸಿ ಬರೆದ ಲೇಖನಗಳಿಗೆ ಎಡೆಯಿಲ್ಲ.

ಲೇಖನಗಳನ್ನು ಕಳುಹಿಸುವವರು ತಮ್ಮಲ್ಲಿ ಒಂದು ಪ್ರತಿಯನ್ನಿಟ್ಟುಕೊಂಡರೆ ಬಹಳ ಒಳಿತು. ಸುಲಭವಾಗಿ ಓದುವಂತೆ ತಿಳಿಬರಹದಲ್ಲಿ ಬರೆದರೆ, ಅಚ್ಚಾದಾಗ ತಪ್ಪುನೆಪ್ಪುಗಳು ಕಡಿಮೆಯಾಗುವುವು.

ಸಂಪಾದಕೀಯ ಪತ್ರವ್ಯವಹಾರಗಳನ್ನು ಸಂಪಾದಕರಲ್ಲೂ ವ್ಯವಸ್ಥಾಪಕರಲ್ಲಿ ಮಿಕ್ಕ ವಿಚಾರಗಳನ್ನೂ ಪ್ರಸ್ತಾಪಿಸಬೇಕು.

ಬಳೇಪೇಟೆ, ಬೆಂಗಳೂರು ಸಿಟಿ.

**ವಾರ್ಷಿಕ ಚಂದಾ ಅಂಚೆ ಮೂಲಕ ರೂ. ೨—೦—೦**

**ಬಿಡಿ ಪ್ರತಿ ಕೇವಲ ಆಣೆ ೦—೨—೦**

---

**ಚಂದಾದಾರರು ವಿಳಾಸ ಬದಲಾವಣೆಯಾದಲ್ಲಿ, ಕೂಡಲೆ ನಮಗೆ ತಿಳಿಸಿದರೆ, ಬಹಳ ಸಹಾಯ ಮಾಡಿದಂತಾಗುವುದು.**

---

## ವಿಷಯಾನುಕ್ರಮಣಿಕೆ

ಸಕಲವೂ ಪ್ರಿಯವಾದ

ಸಮರ ಕಾಲದಲ್ಲಿ



- ನಿಮಗೆ ಪ್ರಿಯವಾದ -

# "ರಾಜಾ ಸ್ನೋ"

ವನ್ನು ಜಾಗರೂಕತೆಯಿಂದ ಉಪಯೋಗಿಸಿ



ಮಣ್ಯಾಂ ಮತ್ತು ಕಂಪೆನಿ

ಬೆಂಗಳೂರು, - - ಮದ್ರಾಸು

ಗಾಲದಲ್ಲೂ ರೂ.ಗೆ ನಾಲ್ಕು ಸೇರು ಅಕ್ಕಿ ಎಂದರೆ, ಎಂತಹ ಅಕ್ಕಿ ಇರಬಹುದು. ಗಜೇಂದ್ರಭೋಗವೇ, ಭೀಮೇಂದ್ರಭೋಗವೋ—ಈ ಮಿತ್ರ ಮೋಸ ಮಾಡಿದನೇ? ಅದಕ್ಕೆ ಹೀಗೆ ಅತಿ ವಿನಯದಿಂದಿದ್ದನೇ ಎಂದು ಮನಸ್ಸು ಯೋಚಿಸಲಾರಂಭಿಸಿತು ಏನಾದರೇನು ಆರೋಗ್ಯಕ್ಕೆ ಅನುಕೂಲ ಎಂದಂದುಕೊಂಡು, ಮಿಕ್ಕ ಸಾಮಾನನ್ನೂ ಕಟ್ಟಿಕೊಂಡು, ಆರೋಗ್ಯಕ್ಕೆ ಅನುಕೂಲವಾಗಲೆಂದು ನಾನೇ ಹೊತ್ತುಕೊಂಡು ಮನೆಗೆ ಬಂದೆ.

ಇದೆಲ್ಲಾ ನಡೆದಿದ್ದು ಶನಿವಾರ. ಅವತ್ತಿನಿಂದ ಊಟಕ್ಕೆ ಕೂತರೆ ವಿಚಿತ್ರಾನ್ನ—ಅರೆಭಕ್ತಾನ್ನ.

"ಏನೇ, ಇದು. ಅನ್ನವೇ, ಇದು"

"ನೀವು ತಂದ ಅಕ್ಕಿಯೇ. ಮಾಡಿಸಿ ಆರಿಸಿ ಮಾಡಿದ್ದೇನೆ."

"ಇದು ತಿಂದರೆ ಬದುಕಲಾಗುತ್ತೆಯೇ?"

"ಹಾಗೆಲ್ಲಾ ಅನ್ನಬೇಡಿ ಅಂದರೆ. ಇದೂ ಇಲ್ಲದೆ, ಬಂಗಾಲಾದವರ ಹಾಗಾದರೆ"

"ಆಗ ಸುಖವಾಗಿಯಾದರೂ ಸಾಯಬಹುದಲ್ಲೆ, ಇದು ತಿಂದು ಸಾಯುವ ಬದಲು, ರಾಮ ರಾಮ ಎಂದು ಉಪವಾಸ ಮಾಡಿ ಸತ್ತರೆ ಸ್ವರ್ಗವಲ್ಲೇ?"

"ಛೀ, ಏನು ಹಾಗಂತೀರಿ? ಇದೇ ವೈಯ್ಯಿಗೆ ಒಂಟಿದರೆ ಒಳ್ಳೆಯದೇ ಆಗುತ್ತೆ. ರಾಗಿ ತಿನ್ನುಲ್ಲವೇ ಜನರು ಹೇಗಿರುತ್ತಾರೆ ಅವರು."

* * *

ಸರಿ, ಹೀಗೆ ನಾಲ್ಕು ದಿನಗಳಾದುವು. ಆ ಸಂಜೆ ನನ್ನ ಮಿತ್ರ ಡಿಪೋ ಅಧಿಕಾರಿ ಮನೆಗೆ ಬಂದ. ಇವತ್ತು ರಜಾ ನನಗೆ ನಿನ್ನೊಡನೆ ಹಾಗೆಯೇ ಗಾಳೀ ಸವಾರಿಗೆ ಹೋಗೋಣ ಎಂದು ಬಂದೆ, ಎಂದು ಹೇಳಿ ನನ್ನನ್ನೂ ಕರೆದುಕೊಂಡು ಹೊರಟ. ಹಾದಿಯಲ್ಲಿ ಆ ಮಾತು ಈ ಮಾತು ಆಡುತ್ತಾ, ರೈಲ್ವೆ ಸ್ಟೇಷನ್ನಿನ ರಸ್ತೆಯಲ್ಲಿ ಹೊರಟೆವು. ಅವನು ಹೇಳತೊಡಗಿದ.

"ನೋಡು ನನ್ನದು ಕಟ್ಯಾಲಗ್ನ. ಈ ವಾರದಲ್ಲಿ ವ್ಯಾಪಾರದಲ್ಲಿ ಕೇಡು. ಮಿತ್ರರಿಂದ ದ್ರೋಹದ ಭಯ ಎಂದಿತ್ತು. ಏನಾಗುತ್ತೋ ಎಂದಿದ್ದೆ. ಈ ವಾರ ಡಿಪೋಗೆ ಬಂದ ಕೊಯಮತ್ತೂರು ಸಣ್ಣ ಅಕ್ಕಿಯಲ್ಲಿ ೩೦ ಸೇರು ಅಕ್ಕಿ ಆ ಹಾಳು ಜವಾನ ಕದ್ದುಬಿಟ್ಟ. ಇದು ಸಮಯದಲ್ಲಿ ನನಗೆ ಗೊತ್ತಾಯಿತು. ಆ ಜವಾನನಿಗೆ ಎಷ್ಟೋ ಸಹಾಯಮಾಡಿದ್ದೆ. ಮಿತ್ರಘಾತುಕ, ಅವನನ್ನು ಕಡೆಗೆ ವರ್ಗ

ಭಾರತೀಯ ಕಾರ್ಮಿಕರಿಂದ

ಭಾರತೀಯ ಬಂಡವಾಳಗಾರರಿಂದ

ಭಾರತೀಯ ಕಲಾಕೌಶಲ್ಯದಿಂದ

ಕೂಡಿರುವುದೇ



# ಬೆಂಗಾಲ್ ಲ್ಯಾಂಪ್ಸ್

ತಯಾರಿಕೆಯ ವೈಶಿಷ್ಟ್ಯ

---

ಭಾರತದಲ್ಲೆಲ್ಲಾ ಉತ್ತಮವಾದುದೆಂದು

ಖ್ಯಾತಿಪಡೆದಿದೆ

ಮಾಡಿಸಿದೆ. ಈ ೩೦ ಸೇರು ಅಕ್ಕಿ ಹೇಗೆ ಸರಿಮಾಡುವುದಪ್ಪಾ ಎಂದಿದ್ದೆ. ಕಡೆಗೆ ಮನೆಯಲ್ಲಿ ಹತ್ತು ಸೇರು ಭತ್ತ ಇದ್ದಿದ್ದು ಜ್ಞಾಪಕ ಬಂತು. ಈ ಟ್ರಿಬ್ಯುಲ್‌ಸಾಣೆ ಅಕ್ಕಿ ಒಂದಿಪ್ಪತ್ತು ಸೇರು, ಈ ಹತ್ತು ಸೇರು ಭತ್ತ ಎರಡೂ ಸೇರಿಸಿ, ಒಂದು ಕಡೆ ಇಟ್ಟು ಮಾರಿಬಿಡೋಣವೆಂದು ತೀರ್ಮಾನಿಸಿದೆ ತಿಳಿಯದವರಿಗೆ ಮಾರಿದರೆ, ದೂರು ಹೇಳಿಯಾರು ಎಂದು ಭಯಪಟ್ಟು, ಸ್ನೇಹಿತರಿಗೆ ಮಾತ್ರ ಇದನ್ನು ಮಾರಿದೆ. ಈಗ ಲೆಕ್ಕ ಸರಿಹೋಯಿತು. ಮಾನ ಉಳಿಯಿತು. ವ್ಯಾಪಾರದಲ್ಲಿ ಕೇಡುಬರುವ ಹಾಗಿದ್ದರೂ, ನನ್ನ ಆರೋಗ್ಯಕ್ಕೆ ಅನುಕೂಲವಾಯ್ತು" ಎಂದ.

"ನನಗೂ ಅದನ್ನೇ ಮಾರಿದೆಯೇನೊ" ಎಂದೆ.

"ಹೌದು" ಎಂದ.

"ಮಿತ್ರ ದ್ರೋಹಿ" ಎಂದೆ.

"ಆರೋಗ್ಯಕ್ಕೆ ಅನುಕೂಲ" ಎಂದ.

"ಏನೋ ಹಾಗಂದರೆ" ಎಂದೆ.

"ಅವತ್ತು ನೋಡಿದ್ದಕ್ಕೂ, ಇವತ್ತು ನೋಡಿದ್ದಕ್ಕೂ ಕಡೇ ಪಕ್ಷ ನಾಲ್ಕು ಪೌಂಡಾದರೂ ಹೆಚ್ಚಿದ್ದೀಯೆ" ಎಂದ.

"ಇಲ್ಲ ಕಣೋ" ಎಂದೆ.

"ನಡೀ ಹೇಗೂ ಸ್ಟೇಷನ್ನಿನ ಹತ್ತಿರ ಇದ್ದೇವೆ, ತೂಕ ಮಾಡಿಯೇ ಬಿಡೋಣ" ಎಂದ.

ಸ್ಟೇಷನ್ನಿಗೆ ಹೋಗಿ ತೂಗಿದರೆ ದಿಟವಾಗಿಯೂ ನಾಲ್ಕು ಪೌಂಡು ಹೆಚ್ಚಾಗಿದ್ದೆ.—

—ಅಲ್ಲಾ, ಗಜೇಂದ್ರ ಭೋಗ ತಿಂದರೆ—ಗಜೇಂದ್ರನಂತೆಯೇ ಬೆಳೆಯ ಬೇಕಾದರೆ—ನಕ್ಷತ್ರಗಳ ಸಹಾಯವಿಲ್ಲದೇ ಸಾಧ್ಯವೇ—ನೀವೇ ಹೇಳಿ.




ಮಕ್ಕಳಿಗೆ ಆರೋಗ್ಯವನ್ನು
ಕೊಡುತ್ತದೆ



ಕೇಸರಿ ಕುಟೀರಂ ಲಿ., ಮದರಾಸು

## ಲೋಧ್ರ—ಗರ್ಭಾಶಯ ಟಾನಿಕ್

ಅಕ್ರಮ ಮುಟ್ಟು, ಬಂಜೆತನ, ಗರ್ಭಜವಾಯು, ನಿದ್ರಾಭಂಗ, ಅಜೀರ್ಣ, ಮಲಬದ್ಧತೆ, ಕೆಮ್ಮು, ತಲೆನೋವು, ಬೆನ್ನುನೋವು ಮುಂತಾದುವನ್ನು ವಾಸಿಮಾಡುವುದು.

## ಅರ್ಕ—ಶ್ರೇಷ್ಠ ಜ್ವರ ನಿವಾರಿಣಿ

ಇನ್‌ಫ್ಲೂಯೆಂಜಾ, ಟೈಫಾಯಿಡ್, ಮಲೇರಿಯ ಮುಂತಾದ ಎಲ್ಲಾ ವಿಧವಾದ ಜ್ವರಗಳನ್ನೂ ಪ್ಲೀಹ ಮತ್ತು ಪಿತ್ತಕೋಶ ರೋಗಗಳನ್ನೂ ಗುಣಪಡಿಸುವುದು.

## ಅಮೃತ—ರಕ್ತಶುದ್ಧಿ ಟಾನಿಕ್

ಎನೀಮಿಯ, ಮಲಬದ್ಧತೆ, ಅಜೀರ್ಣ, ನಿಶ್ಶಕ್ತಿ, ಬುದ್ಧಿಮಾಂದ್ಯ, ಎದೆಯ ನಿಶ್ಶಕ್ತಿ, ಜ್ಞಾಪಕಶಕ್ತಿ ಇಲ್ಲದಿರುವದು, ದೃಷ್ಟಿಮಾಂದ್ಯ, ತಲೆ ತಿರುಗುವುದು, ಚರ್ಮ ರೋಗಗಳು ಮುಂತಾದುವನ್ನು ವಾಸಿಮಾಡುವುದು.

ಏಜಂಟರು :

**ಸಿಟಿ ಮೆಡಿಕಲ್ ಅಂಡ್ ಜನರಲ್ ಏಜನ್ಸಿ,**

**ಚಿಕ್ಕಪೇಟೆ, : : : ಬೆಂಗಳೂರು ಸಿಟಿ.**

ಸಾರಥಿಯಾವರ



# ಪಂತುಲಮ್ಮ



(ತೆಲುಗು)



30—6—1944 ರಿಂದ

ಮೋತೀಲಾಲ್ ಟಾಕೀಸ್, ಮೈಸೂರಿನಲ್ಲೂ

ಮತ್ತು

# ಮೇರಾ ಗಾವ್

(ಹಿಂದೀ)

ಒಲಂಪಿಯಾ ಟಾಕೀಸ್, ಮೈಸೂರಿನಲ್ಲೂ

ಪ್ರದರ್ಶಿಸಲ್ಪಡುತ್ತಿದೆ.

ಬೆಂಗಳೂರು ಸಾಗರ್‌ನಲ್ಲಿ 7-7-1944 ರಿಂದ "ಇಂಕಾರ್"

ವಿವರಗಳಿಗೆ—

ಚಂದ್ರಫಿಲ್ಮ್ಸ್ ಲಿಮಿಟೆಡ್,
ಗಾಂಧಿನಗರ, ಬೆಂಗಳೂರು
— ಇವರಿಗೆ ಬರೆಯಿರಿ

# ಮೈಸೂರು ಲ್ಯಾಂಪ್ ವರ್ಕ್ಸ್

## ಬೆಂಗಳೂರು

---

ಸಾರ್ವಜನಿಕರ ತಿಳಿವಳಿಕೆಗಾಗಿ ಈ ಕೆಳಗೆ "ಮೈಸೂರು ಲ್ಯಾಂಪ್ಸ್" ಗಳ ನ್ಯಾಯವಾದ ಚಿಲ್ಲರೆ ಬೆಲೆಗಳು ಕೊಡಲ್ಪಟ್ಟಿವೆ. ಈ ಬೆಲೆಗಳು ಸಂಸ್ಥಾನಾವುಳೆ ಜಾರಿಗೆ ಬರುತ್ತವೆ.

| ಪ್ರಕಾಶ | ತರಹೆ | | ಒಂದೊಂದಕ್ಕೆ<br>ರೂ. ಆ. ಪೈ |
|---|---|---|---|
| 10-30 | ವಾಕ್ಯೂಂ | ಶುಭ್ರ BC.C.<br>,, E.S.C. | 2—0—0 |
| 40 | ,, | ,, | 2—2—0 |
| 60 | ,, | ,, | 2—4—0 |
| 40 | ಗ್ಯಾಸ್ | ,, | 2—4—0 |
| 60 | ,, | ,, | 2—8—0 |
| 75 | ,, | ,, | 3—0—0 |
| 100 | ,, | ,, | 4—0—0 |
| 150 | ,, | ,, | 6—4—0 |
| 200 | ,, | ,, | 9—0—0 |
| 300 | ,, | ,, | 12—8—0 |

---

ಮೈಸೂರು ದೇಶದ ಏಜಂಟರು :—

**ಓರಿಯೆಂಟಲ್ ಎಲಕ್ಟ್ರಿಕ್ ಕಂಪೆನಿ,**

ವಿಶ್ವೇಶ್ವರಪುರಂ, ಸಜ್ಜನ್‌ರಾಯರ ಪ್ಲೇಸ್,

ಬೆಂಗಳೂರು ಸಿಟಿ.

ವಿಷ್ಣು ಸಿನೆಟೋನ್ ರವರ

# ಮಾಯಾ ನಗರಿ

(ಮುಖ್ಯ ಭೂಮಿಕೆ)

ಯಶವಂತ್ ದವೆ - ರಾಜಕುಮಾರಿ - ಚಂದ್ರಿಕಾ - ಸ್ಯಾಂಸನ್

— ಮೊದಲಾದವರು ಪಾತ್ರವಹಿಸಿದ್ದಾರೆ —

ಧೀರು ಬಾಯ್ ದೇಶಾಯ್

— ಇವರ ದಿಗ್ದರ್ಶನ —

ಶೀಘ್ರದಲ್ಲಿಯೇ ಬೆಂಗಳೂರು ನಗರದ

## ಪ್ಯಾರಮೌಂಟ್ ಟಾಕೀಸಿನಲ್ಲಿ

ಪ್ರದರ್ಶನವಾಗುವುದನ್ನು ಗಮನಿಸಿರಿ.

ವಿವರಗಳಿಗೆ:

**ಗುಡ್‌ವಿನ್ ಪಿಕ್ಚರ್ಸ್ ಕಾರ್ಪೋರೇಷನ್**

**ಸುಬೇದಾರ್ ಛತ್ರಂ ರಸ್ತೆ, ಬೆಂಗಳೂರು ಸಿಟಿ**

**ಅಲ್ಲದೆ, ಬೆಜವಾಡ — ತಿರುಚನಾಪಳ್ಳಿ — ಎರ್ನಾಕುಲಂ — ಶಾಖೆಗಳು.**

— ಬರೆಯಿರಿ.




ಸಂಪುಟ ೩]　　ಕೊರವಂಜಿ—ಜುಲೈ ೧೯೪೪　　[ಸಂಚಿಕೆ ೪

# ಕು ಹ ಕಿ ಡಿ ಗ ಳು

---

ಬೆವರು ಸುರಿಸಿ ಸುರಿಸಿ ದುಡಿಯುವವರಿಗೋಸುಗ ಬೆವರಿಡ್ಜ್ ಪ್ಲಾನ್ ಎಂದು ಹೇಳುತ್ತಿರುವರಂತೆ, ಹೌದೇ?

✤　　✤　　✤

ಇತ್ತಿಂದೀಚೆಗೆ ಬರುವ ಪತ್ರವ್ಯವಹಾರಗಳನ್ನು ನೋಡಿದರೆ, ಕಾಗದದ ಅಭಾವದ ಕಾರಣ ಸ್ವಲ್ಪಮಟ್ಟಿಗಾದರೂ ತಿಳಿಯಿತು.

✤　　✤　　✤

ಜರ್ಮನರು ಚಾಲಕನಿಲ್ಲದ ವಿಮಾನಗಳನ್ನು ಮಾಡುತ್ತಿರುವರಂತೆ—

—ಇದೇನು ಮಹಾ! ನಾಯಕರಿಲ್ಲದ ಸೈನ್ಯಗಳನ್ನೇ ಮಾಡಿರಲಿಲ್ಲವೇ ಅವರು!

✤　　✤　　✤

ಫಿನ್‌ಲೆಂಡಿನಲ್ಲಿ ರಷ್ಯನರ ಮುಂದೋಟವನ್ನು ನೋಡಿ, ಈಗ ಜರ್ಮನ್ ಸೈನ್ಯ ಫಿನ್‌ಲೆಂಡಿನಲ್ಲಿರುವುದಂತೆ.

—ಅಂದರೆ, ಸೋಲಿಗೆ ಫಿನ್‌ಲೆಂಡಿನವರು ಕಾರಣರಲ್ಲ—ಜರ್ಮನರು ಎಂದೆನ್ನಲು ಹೀಗೆ ಹೆಲ್ಸಿಂಕಿಯವರು ಮಾಡಿರಬಹುದೆ—

ಬಂಗಾಳದ ನ್ಯಾಯವಿಧಾಯಕ ಸಭೆಯು ಅನಿಶ್ಚಿತವಾಗಿ ಮುಂದಕ್ಕೆ ಹಾಕಲಾಗಿದೆಯಂತೆ

—ಇದ್ದ ಹಣವೆಲ್ಲಾ ಸದಸ್ಯರ ಭತ್ಯಕ್ಕೆ ಆಗಲೇ ಖರ್ಚಾದ್ದರಿಂದ ಹೀಗೆ ಮಾಡಿದರೆಂಬುದು ಸುಳ್ಳಂತೆ.

✤ ✤ ✤

ಉರಿಯದಿರುವ ಮರದ ಸಾಮಾನುಗಳನ್ನು ಮಾಡಲು ಅರಣ್ಯಶಾಖೆಯವರು ಯತ್ನಿಸುತ್ತಿರುವರಂತೆ.

—ಏಕೆ ಕಷ್ಟಪಡುತ್ತಾರೆ? ನಮ್ಮನೆ ಸೌದೆಯಲ್ಲಿ ಸಾಮಾನುಗಳನ್ನು ಮಾಡಬಾರದೇ?

✤ ✤ ✤

ಮದರಾಸಿನಲ್ಲಿ ಈಗ ಉದ್ದು ದೊರಕಿ ಉದ್ದಿನ ಅಭಾವ ಕಡಿಮೆಯಾಯಿತಂತೆ.

—ಮದರಾಸಿನವರು ಈಗ ಏನು ಬೇಕಾದರೂ ಮಾಡಲು ಸಿದ್ಧ ಎಂದು ಹೇಳುತ್ತಿರುವರಂತೆ.

✤ ✤ ✤

ಅಲ್ಪಸಂಖ್ಯಾತರಾದ ಬ್ರಾಹ್ಮಣರೂ ತಮ್ಮ ಸಂಗಡವೊಂದನ್ನು ಏರ್ಪಡಿಸಿಕೊಂಡು, ತಮ್ಮ ಹಕ್ಕು ಸ್ಥಾನಮಾನಗಳಿಗಾಗಿ ಚಳುವಳಿ ನಡೆಸುತ್ತಾರಂತೆ.—

—ಓಹೋ! ಬ್ರೊಮ್ಮನೀಸ್ತಾನ್.

✤ ✤ ✤

ಕಾಶ್ಮೀರದಲ್ಲಿ ಹವಾ ಬಲು ಹಿತಕರವಾಗಿದೆಯೆಂದು ಸುದ್ದಿ.

—ಆದರೆ, ಜಿನ್ನಾರವರು ಹಾಗಲ್ಲ; ಬಿಸಿ ಬಿಸಿ ಎನ್ನುತ್ತಿರುವರಂತೆ.—

✤ ✤ ✤

—o—

# ಉರಿಗಾಳು

ನಿವೃತ್ತ ವೈಸ್ರಾಯರಾದ ಲಾರ್ಡ್‌ಲಿನ್‌ಲಿತ್‌ಗೌ ಅವರು ಈಗ ಬೈಬಲ್ ಪಾರಾಯಣವನ್ನೂ, ಸಂತಾನ ವಿರೋಧ ಶಾಸ್ತ್ರ ಪಠನವನ್ನೂ ಮಾಡುತ್ತಿದಾರಂತೆ! —ಲಿನ್‌ಲಿತ್‌ಗೌರವರ ತಂದೆಯವರೇ ಆ ಶಾಸ್ತ್ರವನ್ನು ಪಠಿಸಿದರೆ ಚೆನ್ನಾಗಿತ್ತು.

✤ ✤ ✤

ಎಲ್ಲಿ ಯಾರಿಗೆ ಕಷ್ಟಬಂದರೂ ಯಾಕೆ ಎಂದು ಕೊಕ್ಕೆಹಾಕುವ ಗಾಂಧಿಜಿಯವರಿಗೂ ಒಂದು ಕೊಕ್ಕೆ ಹಾಕಿತಲ್ಲಾ, ಆ ಹುಳ!

✤ ✤ ✤

“ನಡುರಾತ್ರಿ ನಕ್ಕು ನಿದ್ರಾಭಂಗಮಾಡಿಸಿದರೆಂದು ನಾರಿಯರಿಬ್ಬರನ್ನು ನ್ಯೂಯಾರ್ಕ್ ನಗರದ ನ್ಯಾಯಸ್ಥಾನದಲ್ಲಿ ನಡವಳಿಕೆ ನಡೆಯಿತು........” ಇಂತಹ ಶೈಲಿಗೆ ನಮ್ಮದೂ ಒಂದು ನಕಾರವಿರಲಿ.

✤ ✤ ✤

“ವಿಶ್ವಶಾಂತಿ ಎಂಬ ವಿಷಯದಮೇಲೆ ಹಿಂಟುವರ್ಷದ ಬಾಲಕನ ಉಜ್ವಲ ಉಪನ್ಯಾಸ!” (ಬಾತ್ಮಿ) ನಮ್ಮ ಮನೆಯಲ್ಲಿ ಆರುತಿಂಗಳ ಕೈಗೂಸು “ಆಹಾರ” ಎಂಬ ವಿಷಯವಾಗಿ ದಿನವೂ ಉಜ್ವಲವಾದ ಉಪನ್ಯಾಸಮಾಡುತ್ತಿದೆ.

✤ ✤ ✤

ವಿಶ್ರಾಂತಿಗಾಗಿ ಪತ್ನೀಸಮೇತ ಪರಸ್ಥಳಗಳಿಗೆ ತೆರಳುವ ಸೆಕ್ರೆಟೇರಿಯಟ್ ಅಧಿಕಾರಿಗಳಿಗೆ ಡಿಲ್ಲಿ ಸರ್ಕಾರದವರು ೩೦೦ ರೂ. ತನಕ ಸಹಾಯಮಾಡುವರಂತೆ. ಆದರೆ, “ಪತ್ನೀಸಮೇತ” ಎಂಬ ನಿರ್ಬಂಧವೇಕೆ?

✤ ✤ ✤

ಕಾಗದದ ಅಭಾವ ಇಷ್ಟು ತೀವ್ರಸ್ಥಿತಿಗೆ ಬಂದಮೇಲೂ ಸಾಲ ಕೊಡುವವರು ಪತ್ರ ಬರೆಯಿಸಿಕೊಳ್ಳುವುದು ಶುದ್ಧ ಅನ್ಯಾಯವೆಂದು ಒಬ್ಬರು ಸೂಚನೆ ಇತ್ತಿದಾರೆ.

✤ ✤ ✤

“ನಮ್ಮ ವಿಶ್ವವಿದ್ಯಾನಿಲಯದಿಂದ ಪ್ರತಿವರ್ಷವೂ ನೂರಾರು ಪ್ರತಿಭಾವಂತ ತರುಣರು ಹೊರಬೀಳುತ್ತಿರುವರು” (ಬಾತ್ಮಿ) ...ಹೌದು! ಸೀಟ್‌ಸಿಕ್ಕಿದೆ!

✤ ✤ ✤

“ಕನ್ನಡ ಮೀಡಿಯಂ ತೆಗೆದುಕೊಂಡ ವಿದ್ಯಾರ್ಥಿಗಳು ಇತರರಿಗಿಂತ ಇಂಗ್ಲೀಷನ್ನು ಚೆನ್ನಾಗಿ ಬಲ್ಲವರಾಗಿದಾರೆ” (ಉಪನ್ಯಾಸ)... ಹಾಗಾದರೆ, ಕನ್ನಡ ಕಲಿಯಬೇಕಾದರೆ, ಇಂಗ್ಲೀಷನ್ನೇ ವ್ಯಾಸಂಗಮಾಡಬೇಕೆ?

# ಒಂದೇ ಕಾಸಿಗಾಗಿ

ನಗರದ ಪ್ರಮುಖ ಬ್ಯಾಂಕೊಂದರಲ್ಲಿ ಗೋಪುವು ನೌಕರನಾಗಿದ್ದ. ಮೂರು ತಿಂಗಳ ಹಿಂದೆ, ಅವನ ತಾಯಿಯು ತಿರುಪತಿ ವೆಂಕಟರಮಣನಿಗೆ ಹರಸಿಕೊಂಡಿದ್ದರಿಂದಲೂ, ಅವನ ತಂದೆ, ಬ್ಯಾಂಕು ಡೈರೆಕ್ಟರುಗಳ ಮನೆಗೆ ನಿತ್ಯಯಾತ್ರೆ ಮಾಡಿದ್ದರಿಂದಲೂ, ಮುಖ್ಯ ಅವನ ಭಾವೀ ಮಾವ ದೊಡ್ಡ ಬಾಯಿಯ ಪತ್ರಿಕಾ ಕರ್ತನಾದ್ದರಿಂದಲೂ, ಗೋಪುವಿಗೆ ಆ ಬ್ಯಾಂಕಿನಲ್ಲಿ ೩೦-೧/೨-೧೩೫ ತಲುಬಿನಲ್ಲಿ ಒಂದು ಕೆಲಸವು ಸಿಕ್ಕಿತ್ತು—ಮೂರು ತಿಂಗಳು ಬ್ಯಾಂಕಿನಲ್ಲಿ ಅಚ್ಚುಮೆಚ್ಚಾಗಿ ಕೆಲಸ ಮಾಡಿದ್ದ.

ಆದರೆ............

✤ ✤ ✤

ಜೂನ್ ೩೦ನೆಯ ತಾರೀಖು ಆಯವ್ಯಯಗಳ ಪಟ್ಟಿ ತಯಾರಾಗಬೇಕಾದ ಕಡೆಯ ದಿನ. ಗೋಪುವಿಗೆ ಇದು ತಿಳಿಯದೆ, ಸಾಯಂಕಾಲ ಶಕುಂತಳೆಯನ್ನು ಕಬ್ಬನ್ ಬನಕ್ಕೆ ಬರಹೇಳಿದ್ದ. ಅಲ್ಲಿ ಸಂಜೆ ಅಡ್ಡಾಡಿ, ತಿಂಡಿ ತಿಂದು, ಬಂದವರನ್ನು ನೋಡಿ ನಕ್ಕು, ನಂತರ ಚಲನ ಚಿತ್ರ ಮಂದಿರಕ್ಕೆ ಹೋಗಿ ಅಲ್ಲಿನ ಗಾಡಾಂಧಕಾರದಲ್ಲಿ, ಲಲ್ಲೆಯಾಡಿ, ರಾತ್ರಿ ಮನೆಗೆ ಹೋಗಬೇಕೆಂದು ಸಕಲ ಏರ್ಪಾಡನ್ನು ಮಾಡಿಕೊಂಡಿದ್ದ.

ಆದರೆ............

✤ ✤ ✤

ಬ್ಯಾಂಕಿನಲ್ಲಿ ಗುಲ್ಲೋಗುಲ್ಲು. ಹುಯಿಲೋ ಹುಯಿಲು, ಗಲಾಟೆಯೋಗಲಾಟೆ—ನೌಕರರೆಲ್ಲರೂ ಅನ್ಯಮನಸ್ಕರಾದಂತೆ ಶತಪಥ.—ಕಾರ್ಯದರ್ಶಿಯ ಕೊಠಡಿಯಿಂದ ಖಜಾಂಚಿಯ ಕೊಠಡಿಗೆ ಸುತ್ತುತ್ತಿದ್ದರು—ಕೆಲವು ನೌಕರರು ಕಿವಿಹಿಂದಿದ್ದ ಪೆನ್ಸಿಲ್ಲನ್ನು ಮರೆತು ಬರೀ ಬೆರಳುಗಳಿಂದಲೇ ತಲೆ ಕೆರೆದುಕೊಳ್ಳಲಾರಂಭಿಸಿದ್ದರು. ಇನ್ನು ಕೆಲವು ನೌಕರರು ಮೂಗಿನ ಮೇಲಿನ ಕನ್ನಡಕವನ್ನು ಹಣೆಗೆ ನೂಂಕಿ, ಮೇಜ, ಜೇಬು, ಜವಾನ ಇವೆಲ್ಲವನ್ನೂ ಹುಡುಕಲಾರಂಭಿಸಿದ್ದರು. ಇನ್ನು ಹಲವು ನೌಕರರು ನಿಂತಿದ್ದ ಕಡೆಯೇ ಗಾಯತ್ರಿ ಜಪ ಮಾಡುವವರಂತೆ ಹೆಬ್ಬೆರಳಿಂದ ಇತರ ಬೆರಳುಗಳನ್ನು ಲೆಕ್ಕ ಹಾಕುತ್ತಿದ್ದರು. ಇನ್ನೂ ಹಲವರು ಹೊರೆ ಪಿಸಾಶಿ ಇರುವುದನ್ನೂ ಮರೆತು ಗಡ್ಡವನ್ನು ತಿರುವ ಹತ್ತಿದ್ದರು. ಸಾಯಂಕಾಲ ಆರು ಗಂಟೆಯ ಸಮಯ. ಯಾರೊಬ್ಬರೂ ಮನೆಗೆ ಹೋಗುವ ಯೋಚನೆಯನ್ನೇ ಮಾಡಿದಂತೆ ಕಾಣಬರಲಿಲ್ಲ. ಗೋಪುವಿಗೆ ಆತುರ, ಬೇಗ ಹೋಗಬೇಕೆಂದು. ಹೊಸ ನೌಕರ ಕೇಳುವುದಕ್ಕೆ ಹೆದರಿಕೆ. ಕಡೆಗೂ ಶಕುಂತಲೆಯನ್ನು ಜ್ಞಾಪಿಸಿಕೊಂಡು, ಉದ್ಯಾನವನದಲ್ಲಿ, ಕಾಡುಮೃಗಗಳು ಹೇರಳವಾಗಿ ಓಡಾಡುವ ಉದ್ಯಾನವನದಲ್ಲಿ, ಒಬ್ಬಳೇ ಏಕಾಂಗಿಯಾಗಿರುವುದನ್ನು ನೆನೆಸಿಕೊಂಡು ಧೈರ್ಯಮಾಡಿ ಪಕ್ಕದಲ್ಲಿದ್ದ ಹಳಬ ನೌಕರನನ್ನು ಕೇಳಿಯೇಬಿಟ್ಟ.

"ಏನ್ರೀ, ಇವತ್ತು ಯಾರೂ ಹೊರಗೆ ಹೊರಡುವಂತೇ ಕಾಣುವುದಿಲ್ಲ. ಇವತ್ತು ಎಷ್ಟು ಹೊತ್ತಿಗೆ ಬ್ಯಾಂಕು ಮುಚ್ಚುವುದು, ದಿನಾಲೂ ಐದು ಗಂಟೆ ಹೊಡೆಯುವುದೇ ತಡ, ಟೆನ್ನೀಸ್ ಬ್ಯಾಟು, ಚಿಲ್ಲರೆ ದುಡ್ಡು, ಛತ್ರಿಗಳನ್ನು ತೆಗೆದು ಕೊಂಡು ಒಬ್ಬೊಬ್ಬ ಅಧಿಕಾರಿಯೂ ಒಂದೊಂದು ಮಾರ್ಗವಾಗಿ ಹೊರಡುತ್ತಿದ್ದರು, ಇವತ್ತೇನು ಇಷ್ಟು ಗಲಾಟೆ?"

ಹಳಬ ನೌಕರನು ಉತ್ತರ ಕೊಟ್ಟನು

"ನೋಡು ಗೋಪೂ, ನಮ್ಮ ಆಯವ್ಯಯದ ಪಟ್ಟಿಯಲ್ಲಿ ಒಂದು ಕಾಸು ಹೆಚ್ಚುಕಡಿಮೆ ಬಂದಿದೆ. ಇವತ್ತು ಲೆಕ್ಕ ಸರಿಮಾಡಿಸಬೇಕು, ಅದಾಗುವ ತನಕ ಯಾರೂ ಹೊರಗೆ ಹೋಗುವುದಕ್ಕಾಗುವುದಿಲ್ಲ. ಅದಕ್ಕೇ ಇಷ್ಟು ಅವಾಂತರ"

ಗೋಪುವಿಗೆ ತಲೆ ಕೆರೆದುಕೊಳ್ಳುವಂತಾಯಿತು. ಇತ್ತ ಒಂದು ಕಾಸಿಗಾಗಿ ಬ್ಯಾಂಕಿಗೆ ಬ್ಯಾಂಕೇ ಅಲ್ಲೋಲ ಕಲ್ಲೋಲ. ಅತ್ತ ಒಂದು ಕಾಸಿನಿಂದ ಕಾದಿರುವ ಶಕುಂತಲೆ. ಇವನು ಅಷ್ಟು ವಿಳಂಬವಾಗಿ ಹೋದರೆ ಅಲ್ಲಿ ಬನಕ್ಕೆ ಬನವೇ ಅಲ್ಲೋಲ ಕಲ್ಲೋಲ. ಇತ್ತ ನದಿ—ಅತ್ತ ಪುಲಿ.—

ಆದರೆ, ಗೋಪುವಿಗೆ ಒಂದು ಉಪಾಯ ಹೊಳೆಯಿತು. ಮೆಲ್ಲಗೆ ಯಾರಿಗೂ ಕಾಣದಂತೆ ಜೇಬಿನಿಂದ ಒಂದು ಕಾಸನ್ನು ತೆಗೆದ. ನೆಟ್ಟಗೆ ಪ್ರಧಾನ ಕಾರ್ಯ ದರ್ಶಿಯ ಕೊಠಡಿಗೆ ಹೋದ ಸ್ವಾಮಿ ಅಂದ. "ಆ" ಎಂದರು. ಹೆಚ್ಚುಕಡಿಮೆ ಯಾದ ಆ ಕಾಸು ಎಂದ. ಆಹಾ! ಎಂದರು ಅವರು. ಅದು ನನ್ನ ಮೇಜಿನ ಮೇಲೆ ಪುಸ್ತಕದ ಕೆಳಗೆ ಬಿದ್ದಿತ್ತು. ಇಗೋ ಎಂದು ಆ ಕಾಸನ್ನು ಅವರ ಮೇಜಿನ ಮೇಲಿಟ್ಟ.

ಛೇ—ಅವಿವೇಕಿ, ಒಂದು ಕಾಸು ಕಡಿಮೆ ಬಂದಿಲ್ಲ, ಲೆಕ್ಕದಲ್ಲಿ ಹೆಚ್ಚು ಬಂದಿದೆ—ಎಂದು ರೇಗಿದರು, ಅವರು ಅಲ್ಲದೆ, ತಿರುಗಿ ಇಲ್ಲಿಗೆ ನೀನು ಬರಬೇಕಾ ಗಿಲ್ಲ ಎಂದೂ ಗುಟುರಿದರು.

ಈ ಗಲಾಟೆಯಲ್ಲಿ ಗೋಪು ಎಲ್ಲವನ್ನೂ ಮರೆತು ನೆಟ್ಟಗೆ ಒಂಬತ್ತು ಗಂಟೆಯ ಹೊತ್ತಿಗೆ ಮನೆಗೆ ಹೋದ. ಅಲ್ಲಿ ಶಕುಂತಲೆಯೂ ಇಲ್ಲ. ಅಡಿಗೆಯೂ ಇಲ್ಲ ಇನ್ನೆಲ್ಲಿ ಹುಡುಕಿಕೊಂಡು ಹೋಗುವುದು ಎನ್ನುತ್ತಿದ್ದಾಗ, ಶಕುಂತಲೆಯು ಹಿಂತಿ ರುಗಿ ಬಂದಳು ತನ್ನ ಭಾವ, ಅಕ್ಕ ಇಬ್ಬರೂ ಬನಕ್ಕೆ ಬಂದಿದ್ದರೆಂದೂ, ಇವನು ಬಾರದುದನ್ನು ಕಂಡು ಅವರು ಇವಳನ್ನು ಕರೆದುಕೊಂಡು ಚಲನಚಿತ್ರಕ್ಕೆ ಹೋಗಿದ್ದ ರೆಂದು ಮುಖ್ಯ ರಾಮರಾಜ್ಯವು ಬಲು ಚೆನ್ನಾಗಿತ್ತೆಂದೂ, ಹೇಳಿದಳು.

ರಾಮರಾಜ್ಯವು ಬಲು ಚೆನ್ನಾಗಿತ್ತೆ? ಅಂದ ಮೇಲೆ ಅಲ್ಲಿ ಕಾಸು ಇತ್ತೇ, ಇತ್ತಿಲ್ಲ ಎಂದು ಗೋಪು ಗೊಣಗಿದ.

✦ ✦ ✦

ಊಟದ ಕೆಲಸಕ್ಕಾಗಲೀ, ತೋಟದ ಕೆಲಸಕ್ಕಾಗಲೀ ಚೂಟಿಯಾದ ಯುವ ಕನು ಬೇಕಾದರೆ—ರಿ.—ಗೋಪುವು ಇನ್ನೂ ಬಿಡುವಾಗಿದ್ದಾನೆ.

# ಕನಸಿಗ

"ಆ ಚಿಕ್ಕ ಮನೆ ಮೂಲೆಯಲ್ಲಿ ಒಂದು ದೊಡ್ಡ ಮೊಸಳೆ ಸಂದೂಕದ ಮೇಲೆ ಕೂತುಕೊಂಡಿತ್ತು. ನಾನು ತಿರುಗಿ ನೋಡುತ್ತಲೂ ದೊಡ್ಡದಾಗಿ ಆ ಗರಗಸದ ಬಾಯನ್ನು ತೆರೆಯಿತು."

ಹೀಗೆ ಹೇಳುತ್ತಿದ್ದ ಮುನ್ಸಾಮಿಯ ಕಡೆಗೆ ಎಲ್ಲರೂ ತಿರುಗಿದೆವು. ಆ ಸಾಯಂಕಾಲ ನಾನೂ, ಮುನ್ಸಾಮಿ, ರಾಮ್ಸಾಮಿ, ಆನಂದು ನಾಲ್ಕು ಜನವು ಪಾರ್ಕಿನಲ್ಲಿ ಕೂತುಕೊಂಡು ಸಿಗರೇಟ್ ಸೇದುತ್ತಾ ಇದ್ದೆವು. ಯಾವುದೋ ಮಾತನಾಡುತ್ತಿದ್ದಾಗ ಮುನ್ಸಾಮಿಯು ಆ ಮಧ್ಯಾಹ್ನ ಅವನು ಕಂಡ ಕನಸನ್ನು ನಮಗೆ ವಿಶದಪಡಿಸುತ್ತಿದ್ದ—

"ಆ ಮೇಲೆ" ಎಂದೆ.

"ಹಾಗೆಯೇ ನೋಡುತ್ತಿದ್ದೆ. ಮೊಸಳೆಯ ಬೆನ್ನಿನ ಮೇಲೆ ಒಂದು ಚಿಕ್ಕ ಬುಟ್ಟಿ, ಆ ಬುಟ್ಟಿಯ ಮೇಲೆ ಕುಪ್ಪು ನಿಂತಿದ್ದ. ಒಂದು ಬಾರಿ ಗಟ್ಟಿಯಾಗಿ ಅವನು ಕೆಮ್ಮಿದ. ಕುಪ್ಪು ಕೆಮ್ಮಿದರೆ ಆಗುವ ಶಬ್ದವು ನಿಮಗೆಲ್ಲಾ ತಿಳಿದೇ ಇದೆಯಲ್ಲಾ"

ನಾನೇ ಕುಪ್ಪು. ನನಗೆ ಸ್ವಲ್ಪ ಬುದ್ಧಿಯಿದ್ದಿದ್ದರೆ ಮುನ್ಸಾಮಿಯ ಮಾತಿಗೆ ಮರುಮಾತು ಆಡದೆ, ತಂಪಾಗಿ ಧೂಮಪಾನ ಮಾಡುತ್ತಿದ್ದೆ; ಆದರೆ ಸ್ವಲ್ಪ ಮುಂಗೋಪ. ಅಲ್ಲದೆ ಸಾಮಾನ್ಯ ಜನರು ಸ್ವಾಭಾವಿಕವಾಗಿ ಮಾಡುವ ಕೆಮ್ಮನ್ನು ನಾನೂ ಮಾಡಿದರೆ, ಅದನ್ನು ಹಾಸ್ಯಮಾಡುವುದು ನನಗೆ ರುಚಿಸಲಿಲ್ಲ.

"ನಾನೇನು ಹಾಗೆ ಸಿಡ್ಲು ಹೊಡೆದಂತೆ ಕೆಮ್ಮುವುದಿಲ್ಲ" ಎಂದೆ.

ಕನಸಿಗನು ನನ್ನ ಕಡೆ ತಿರುಗಿದನು. ಉಳಿದವರೂ ನನ್ನ ಕಡೆ ನೋಡಿದರು.

"ಅಲ್ಲದೆ ಹಾಗೆ ನಾನು ಮೊಸಳೆ ಬೆನ್ನಿನ ಮೇಲೆ ಗೂಡೆಯ ಅಂಬಾರಿಯಲ್ಲಿ ಕುಳಿತಿದ್ದರೆ ಸ್ವಂತ ರಕ್ಷಣೆಯ ವಿಚಾರವಾಗಿ ಯೋಚಿಸುತ್ತಿದ್ದೆನೇ ವಿನಹಾ ಕೆಮ್ಮುತ್ತಿದ್ದಿಲ್ಲ."

"ಆದರೆ ಕುಪ್ಪು, ಅದು ನನ್ನ ಕನಸ್ಸಿನಲ್ಲಿ ಮಾತ್ರ" ಎಂದು ಶುರುಮಾಡಿದ ಆ ಜಿರಳೆಯಂತಿದ್ದ ಮುನ್ಸಾಮಿ.

"ಅಲ್ಲದೆ ನೀನು ಮೊಸಳೆಯ ಮೇಲೆ ಅಂಬಾರಿ ಹಾಕಿ ಕುಳಿತಿದ್ದಾಗ ನಿನಗೆ ಸ್ವಲ್ಪವೂ ಭಯವಿರಲಿಲ್ಲ. ಕನಸುಗಳು ಎಷ್ಟು ಆಶ್ಚರ್ಯಕರನೋಡು. ಏನೇನೊ ನಮ್ಮ ಬುದ್ಧಿಯನ್ನು ಮೀರಿದುವೆಲ್ಲಾ ನಡೆಯುವುದು. ಆದರೆ, ಅವೆಲ್ಲವೂ ಸಾಕ್ಷಾತ್ತಾಗಿ ನಡೆದಂತೆ ನಮಗೆ ತೋರುವುದು. ಅಲ್ಲವೇ"

ಮತ್ತು ಆ ತೆರೆದ ಗರಗಸದ ಬಾಯಿಗಳು ಸುಮ್ಮನೆ ಪಿಟಪಿಟಗುಟ್ಟುತ್ತಿದ್ದುವು. ಮುಂದೆ ನಡೆದುದನ್ನು ಹೇಳಲೇ ?

ನಾವೆಲ್ಲರೂ ಅವನಿಗೆ 'ಬೇಡ' ಎಂದು ನೋಡಿದೆವು. ಆ 'ಬೇಡ' ಎಂದು ನಾವು ತೋರಿದ ಮುಖದ ಅಭಿನಯದಲ್ಲಿ ಅವನು ಉತ್ತೇಜಕವನ್ನು ಪಡೆದು ಮರಳಿ ಮುಂದುವರಿದ.

"ಆಗ ನಾನು ಒಂದು ಜಟ್ಕಾವನ್ನು ಕರೆದೆ".

"ಏನು ಎತ್ತಿನ ಗಾಡಿಯೇ" ಎಂದೆ. "ಅಲ್ಲಾ ಒಂದು ಜಟ್ಕಾ. ಜಟ್ಕಾ ಸಾಬಿಯ ಜತೆಯಲ್ಲಿದ್ದರೆ ಈ ಮೊಸಳೆಯ ಭಯವೂ ಕಡಿಮೆಯಾಗುವುದೆಂದು ಏನೊ ಒಂದು ನಂಬಿಕೆ. ಆ ಜಟ್ಕಾದಲ್ಲಿ ಕುಳಿತುಕೊಂಡು ಮುಂದ್ಹೊರಟೆ. ಚಿಕ್ಕಮನೆಯಲ್ಲಿ ಆ ವೇಳೆಗೆ ತುಂಬಾ ಗಲಭೆ—ಹಾಗೆಯೇ ನೋಡುತ್ತಿರುವಲ್ಲಿ ಅದು ಒಂದು ರಸ್ತೆಯಾಗಿತ್ತು. ಅಲ್ಲದೆ ಅದು ಜಟ್ಕಾವಾಗಿತ್ತಿಲ್ಲ. ಬೊಂಬೆಗಳಲ್ಲಿ ಸೂರ್ಯನು ನಡೆಯಿಸುವ ಒಂದು ಚಕ್ರದ ಗಾಡಿಯಾಗಿತ್ತು.

"ನೀನು ನೋಡಿದ್ದು ವಾಸ್ತವವಾಗಿಯೂ ಮೊಸಳೆಯೆ ?" ಎಂದೆ.

"ಅದೇ ಈಗ ಹೇಳಬೇಕೆಂದಿದ್ದೆ. ಆ ಮೊಸಳೆಯ ಕಡೆ ತಿರುಗಿ ನೋಡಿದೆ. ಅದರ ಹಿಂಭಾಗವು ಒಂದು ಬೆಕ್ಕಿನಂತೆ ಕಾಣಿಸಿತು. ಅಲ್ಲದೆ ಅದು ರಾಮಸ್ವಾಮಿ ಎಂಬುದು ತಿಳಿಯಬಂತು. ಇನ್ನೊಂದು ಸಲ ನೋಡಿದೆ. ಅದು ರಾಮಸ್ವಾಮಿ ಎಂಬುದು ಸ್ಥಿರವಾಯಿತು.

ನನ್ನ ಪಕ್ಕದಲ್ಲಿದ್ದ ರಾಮಸ್ವಾಮಿಯು "ಕ್ಷಮಿಸು, ನೀನು ನೋಡಿದ ಮೊಸಳೆಯೇ ನಾನಾಗಿದ್ದೆನೋ, ಅಲ್ಲದೆ ಬೆಕ್ಕಿನಂತಿದ್ದ ಹಿಂಭಾಗವು ಮಾತ್ರವೊ"

'ಆ' ಎಂದು ಗುಟುರಿಸಿದ ಮುನಿಸ್ವಾಮಿ.

"ಆ ವಿಚಾರ ನನಗೆ ತಿಳಿಯಬೇಕು. ಬೆಕ್ಕಿನಂತಿದ್ದ ಹಿಂಭಾಗವು ಮಾತ್ರ ನಾನಾದರೆ ಸುಮ್ಮನಿರುತ್ತೇನೆ. ಆದರೆ, ಮೊಸಳೆಯೇ ನಾನಾಗಿದ್ದರೆ ಧೈರ್ಯವಾಗಿ ಸಿನೀಮಾ ನೋಡಿಕೊಂಡು ಮನೆಗೆ ಹೋಗಿ ಹೆಂಡತಿಯನ್ನು ಎದುರುಗೊಳ್ಳುತ್ತೇನೆ. ಈ ಸಾಯಂಕಾಲದ ಕಾರ್ಯದ ಭಾರವು ನೀನು ಹೇಳುವುದರ ಮೇಲೆ ನಿರ್ಣಯಿಸಬೇಕು."

ಸ್ವಲ್ಪ ಕಾಲ ಎಲ್ಲರೂ ನಿಶ್ಶಬ್ದವಾಗಿದ್ದರು. ಮುನ್ಸಾಮಿ ನಂತರ ನನ್ನ ಕಡೆಗೆ ತಿರುಗಿ ಮಾತನಾಡಿಸಿದ. ಇದ್ದವರಲ್ಲಿ ನನ್ನ ಮುಖ ಬಾಯಿಯೇ ಬಹಳ ಪಾಲು ಬೆಕ್ಕಿನಂತಿದ್ದಿರಬೇಕು. ಧೈರ್ಯದಿಂದ ನನ್ನ ಕಡೆಗೆ ತಿರುಗಿದ.

"ನೀನು ಕನಸು ಕಂಡಾಗ ಅದರಲ್ಲಿ ಬರುವವರೆಲ್ಲರೂ ನಿನಗೆ ಹೇಗಾದರೂ ಗುರ್ತಿರುವರು. ಅಲ್ಲದೆ, ನಿರ್ಜೀವ ವಸ್ತುಗಳೂ ಸಜೀವವಾಗಿ ಕಾಣಿಸುವುದು—ನೋಡು, ಹೋದ ಮಂಗಳವಾರ. ಮಂಗಳವಾರವೇ ಅಲ್ಲಾ, ಗುರುವಾರ ಕಂಡ ಕನಸಿನಲ್ಲಿ ನೀನು ಒಂದು ಕಲ್ಲು ಬೆಂಚಾಗಿದ್ದೆ."

ಆವೇಳೆಗೆ ಕನಸ್ಸು ಹೇಳುವ ಆವೇಶವು ಅವನನ್ನು ತಿರುಗಿ ಆವರಿಸಿತ್ತು. ಕನವರಿಸಿಕೊಳ್ಳುವನಂತೆ ತೊದಲು ಮಾತನಾಡಲಾರಂಭಿಸಿದ.

"ಬೊಂಬೆಗಳಲ್ಲಿ ಸೂರ್ಯನು ನಡೆಯಿಸುವ ಒಂದು ಚಕ್ರದ ಜಟ್ಕಾದಲ್ಲಿ ಕುಳಿತುಕೊಂಡು ನಾನು ಆ ರಸ್ತೆಯಲ್ಲಿ ಹೋಗುತ್ತಿದ್ದೆ. ಇದ್ದಕ್ಕಿದ್ದಹಾಗೆ ಒಂದು ಮರುಭೂಮಿಯಲ್ಲಿ ಹೋಗುತ್ತಿದ್ದಂತಾಯ್ತು. ಮರುಭೂಮಿಯಲ್ಲಿ—ನಮ್ಮೂರ ದಕ್ಷಿಣದಲ್ಲಿರುವ ಬತ್ತಿಹೋದ ಕೆರೆಯ ಅಂಗಳ. ಸುತ್ತಲೂ ಬೇಕಾದಷ್ಟು ಕೊಕ್ಕರೆಗಳಿದ್ದುವು

ಅದರಲ್ಲಿ ನಾನೊಂದೊ? ಎಂದು ಆನಂದುವು ಚಪ್ಪರಿಸಿದ. ಆನಂದುವು ಸುಮಾರು ಆರಡಿ ಎತ್ತರ, ಅರ್ಧಡಿ ಗಾತ್ರ ಇರುವ ವಸ್ತಾದಿ.

"ಅಲ್ಲಾ, ಅಲ್ಲಾ" ಎಂದು ಬೇಗ ಹೇಳಿ, ಮುನ್ಸಾಮಿ ಮುಂದುವರಿದ.

ಇದ್ದಕ್ಕಿದ್ದ ಹಾಗೆಯೇ ಕೆರೆಯ ತೂಬಿನಲ್ಲಿ ಸಿಕ್ಕಿಹಾಕಿಕೊಂಡ. "ಆ ವೇಳೆಗೆ ಆ ಮೊಸಳೆಯು ಹತ್ತಿರ ಹತ್ತಿರ ಬರುತ್ತಿತ್ತು. ನಾನು ಕೆರೆಯ ಅಂಗಳದಲ್ಲಿ ಸಿಕ್ಕಿದ ಕಪ್ಪೆಚಿಪ್ಪುಗಳನ್ನು ಎಸೆಯುತ್ತಿದ್ದೆ. ಒಂದು ಚಿಪ್ಪು ತಗಲಿದರೂ ಆ ಹಾಳು ಮೊಸಳೆಯು ಸಾಯುತ್ತಿತ್ತು. ಆದರೆ, ಒಂದೂ ಗುರಿ ಬೀಳಲಿಲ್ಲ ಕ್ಷಣ ಕ್ಷಣಕ್ಕೂ ಮೊಸಳೆಯು ಹತ್ತಿರ ಬಂದಿತು."

ಈ ವೇಳೆಗೆ ಅವನ ಕಣ್ಣುಗಳು ಕನಸಿಗನಂತಾದುವು. ನಾನು ಪಕ್ಕದಲ್ಲಿ ರಾಮ್ಸಾಮಿ ಕಡೆಗೆ ನೋಡಿದೆ, ಅವನ ಜಾಗವು ಖಾಲಿ........

"ಮೊಸಳೆಯು ಇನ್ನೂ ಹತ್ತಿರ ಬರುತ್ತಲೇ ಇತ್ತು. ಹತ್ತಿರ ಬಂತು.

"ಇನ್ನು ಎರಡೇ ಅಡಿ ನಮ್ಮಿಬ್ಬರಿಗೂ ಇನ್ನೇನು ಆ ಗರಗಸದ ಬಾಯನ್ನು ಆ ಅಸಹ್ಯವಾಗಿರುವ ಅ|ಹಲ್ಲುಗಳನ್ನು ನನ್ನ ಮೈಮೇಲೆ ಪ್ರಯೋಗಿಸಬೇಕು"

ಇದ್ದಕ್ಕಿದ್ದಹಾಗೆಯೇ ಕನಸಿಗನು ಅವನ ಜಾಗದಲ್ಲಿರಲಿಲ್ಲ, ಮಾಯವಾಗಿದ್ದನು.

✦ ✦

ಮುಂದಿನ ಕ್ಷಣದಲ್ಲಿ ಆ ಬೆಕ್ಕು ಮೊಸಳೆಯು ಕನಸಿಗನ ಕತ್ತನ್ನು ಮನಸೆ ದಣಿಯ ಕಿವಿಚುತ್ತಿತ್ತು. ನಾನು ಆನಂದು ಬಿಡಿಸಿಕೊಳ್ಳಬೇಕಾಯ್ತು.

—— 0 ——

# ಆಹಾರವನ್ನು ಹೆಚ್ಚಾಗಿ ಬೆಳೆಯಿರಿ

---

ನಾಡಿಗೆ ನಾಡೇ ಹೊಟ್ಟೆಗಿಲ್ಲ ಎಂದು ಹೊಡೆದುಕೊಳ್ಳುತ್ತಿದೆಯಂತೆ. ಅನ್ನ ಬ್ರಹ್ಮನ ಕೂಗೇ ಕೂಗಂತೆ, ಸಾರಿನ ಲಕ್ಷ್ಮಿಯ ಗೋಳೇ ಗೋಳಂತೆ. ದೇಶಾದ್ಯಂತವೂ ಆಹಾರವನ್ನು ಹೆಚ್ಚಾಗಿ ಬೆಳೆಯಿರಿ ಎಂಬ ಸಾಮೂಹಿಕ ಸಂದೇಶವಂತೆ.

ನಾನೇನೋ ಹೋಟಲಿನಲ್ಲಿ ಕೆಲಸಕ್ಕಿರುವವನು, ಹಾಗೂ ಯಜಮಾನನ ದೂರದ ನೆಂಟ. ಆಹಾರದ ಅಭಾವ ನನಗೇನೂ ತಟ್ಟಿಲ್ಲ. ಅಮಾವಾಸ್ಯೆ ಸಂತೆಯಲ್ಲೋ, ಪೌರ್ಣಮಿ ಡಿಪೋಗಳಲ್ಲೋ, ಎಲ್ಲೋ ನಮಗೆ ಬೇಕಾದ ಸಾಮಾನು ನಮಗೆ ಸಿಕ್ಕುತ್ತಲೇ ಇದೆ ಅನ್ನಿ. ಮೊನ್ನೆ ನನಗೆ ಒಂದು ದಿನ ರಜ ಸಿಕ್ಕಿತು. ಯಾರೋ ದೇಶೋದ್ಧಾರಕರು ಹರಹರ ಅಂದರು, ಹರತಾಳ ಎಂದು ಜನರು ಕೂಗಿದರು. ಕಲ್ಲು ಬೀಳುತ್ತೇನೋ ಗಲಭೆ ಹೆಚ್ಚುತ್ತೇನೋ ಎಂದು ಯಜಮಾನರು ಅಂಗಡಿ ಮುಚ್ಚಿದರು. ಏನೂ ಕೆಲಸವಿಲ್ಲದೆ ಅಡ್ಡಾಡಿ ಬರೋಣವೆಂದು ಹೊರಗೆ ಹೊರಟೆ. ಆಗ ಈ ಸಾಮೂಹಿಕ ಸಂದೇಶ ಎದುರಿಗೆ ಕಂಡಿತು. ಯಾರ ಯಾರ ಮನೆಯಲ್ಲಿ ಯಾವ ಯಾವ ರೀತಿ ಆಹಾರವನ್ನು ಹೆಚ್ಚಾಗಿ ಬೆಳೆಯುತ್ತಾರೋ ಎಂದು ನೋಡಹೊರಟೆ.

ಮೊದಲಾಗಿ ಈ ಕೂಗನ್ನು ಮೊದಲು ಕೂಗಿದ ಅಧ್ಯಕ್ಷರ ಮನೆಗೆ ಹೋದೆ. ಏನು ಅಂದವಾದ ತೋಟ ಅನ್ನುತ್ತೀರಿ, ನೋಡುವುದಕ್ಕೆ ಎರಡು ಕಣ್ಣು ಸಾಲದು. ಒಂದು ಪಂಕ್ತಿಗೆ ಪಂಕ್ತಿಯೇ ವಿಧವಿಧ ಬಣ್ಣದ ಕ್ರೋಟನ್ ಗಿಡಗಳು. ಮಧ್ಯೇ ಮಧ್ಯೇ ರೋಜಾ ಗಿಡಗಳು. ಅಲ್ಲಲ್ಲಿ ಬೂದು ಬಣ್ಣದ ಹೂವಿನ ಬಳ್ಳಿಗಳು—ಒಂದೆರಡು ಸಂಪಿಗೆ ಮರ. ಅಲ್ಲೊಂದು ಇಲ್ಲೊಂದು ಹಸುರು ಬಣ್ಣದ ಕುರ್ಚಿಗಳು—ಬೆಂಚುಗಳು—ಈ ಮನೆಯವರು ಕ್ರೋಟನ್ ಪಲ್ಯ ತಿನ್ನುತ್ತಾರೆಯೇ—ಬಳ್ಳಿ ಅವಿಯಲ್ ಉಣ್ಣುತ್ತಾರೋ—ರೋಜಾ ಚಟ್ನಿ ಮಾಡಿದರೂ ನಮ ಒಂದೂ ಬಗೆ ಹರಿಯದೆ ಮುಂದಕ್ಕೆ ಹೊರಟೆ.

ಎರಡನೆಯದಾಗಿ ಈ ಚಳುವಳಿಯ ಕಾರ್ಯದರ್ಶಿಯ ಮನೆಗೆ ಹೋದೆ. ಏನು ದೊಡ್ಡ ಮೈದಾನ ಮನೆಯ ಸುತ್ತಲೂ. ಆಹಾ! ಎಷ್ಟು ಚೆನ್ನಾದ ಗಾಳೀ ಹವ. ಇವರೇನು ಬೆಳೆ ಬೆಳೆಯುತ್ತಿದ್ದಾರೆ ಎಂದು ನೋಡಿದೆ. ದೊಡ್ಡದೊಂದು ಬಿದಿರಿನ ಮೆಳೆ ಭವಿಷ್ಯತ್ತಿಗಾಗಿ ಈಗಿನಿಂದಲೂ ಸಿದ್ಧಮಾಡಿಕೊಳ್ಳುವಷ್ಟು ದೂರಾಲೋಚನೆಯುಳ್ಳವರಿವರು ಎಂದುಕೊಂಡೆ ಅದರ ಸುತ್ತಲೂ ಇಪ್ಪತ್ತು ಗಜದಷ್ಟು ದೂರ ಬರೀ ಹುಲ್ಲುಗಾವಲು—ಆಹಾ! ಹುಟ್ಟಿಸಿದ ದೇವರು ದಿಟವಾಗಿಯೂ ಇವರಿಗೆ ಹುಲ್ಲು ಮೇಯಿಸಿಯೇ ಮೇಯಿಸುತ್ತಾನೆ ಎಂಬುದೂ ಅರ್ಥವಾಯಿತು—ಇನ್ನೊಂದು ಕೊನೆಯಲ್ಲಿ ಒಂದು ದೊಡ್ಡ ಆಲದ ಮರ ಏಕಾಂಗಿಯಾಗಿ ಕೊರಗಿ

ಸೊರಗುತ್ತಿದ್ದ ಅಪ್ಪನ ಕಾಲದ ಆಲದ ಮರ—ಇನ್ನೊಂದು ಮೂಲೆಯಲ್ಲಿ ಒಂದು ದೊಡ್ಡ ಬಿಲ್ಪತ್ರೆ ಮರ ದೋರೆಗಾಯಿಗಳಿಂದ ತುಳುಕುತ್ತಿದ್ದ ಮರ. ನೋಡಿ ಆಶ್ಚರ್ಯವಾಯಿತು. ಇಷ್ಟು ಬಿಲ್ಪತ್ರೆ ಕಾಯಿ ಊಟಕ್ಕೆ ಉಪಯೋಗಿಸಬೇಕಾದರೆ ಇವರ ಮನೆಯಲ್ಲೇನು, ಅತಿಸಾರದ ಅಂಟು ಜಾಡ್ಯವೇ—ಎನ್ನಿಸಿತು.

ಕಡೆಗೆ ಈ ಚಳುವಳಿಯ ನೌಕರನ ಗುಡಿಸಿಲಿನ ಬಳಿಗೆ ಹೋದೆ, ಗುಡಿಸಿಲಿನ ಸುತ್ತಲೂ ಮುಳ್ಳು ಬೇಲಿ. ನಾನು ಹೋಗುವ ಹೊತ್ತಿಗೆ ಮನೆ ಮಂದಿ ಮಕ್ಕಳೆಲ್ಲರೂ ಗಿಡಗಳಿಗೆ ನೀರು ಹಾಕುತ್ತಿದ್ದರು. ಅಲ್ಲಲ್ಲಿ ಬದನೆಕಾಯಿ ಗಿಡಗಳು—ಒಂದು ಚದುರದಲ್ಲಿ ಚಪ್ಪರಬದನೆ, ಮೂಲೆಯೊಂದರಲ್ಲಿ ಮುಲ್ಲಂಗಿ, ತುದಿಯಲ್ಲಿ ತೊಗರೀಕಾಯಿ, ಪಕ್ಕದಲ್ಲಿ ಪಡವಲಕಾಯಿ, ಸೂರಿನ ಮೇಲೆಲ್ಲಾ ಸಕ್ಕರೆ ಗುಂಬಳ. ನೋಡಿ ಮನದಣಿಯಿತು. ಈ ಮನೆಯವರಾದರೂ ಆಹಾರವನ್ನು ಹೆಚ್ಚಾಗಿ ಬೆಳೆಯುತ್ತಿರುವರಲ್ಲ ಎನ್ನಿಸಿತು. ಹೊಟ್ಟೆ ತುಂಬಾ ತರಕಾರಿಯಾದರೂ ತಿನ್ನಬಹುದಲ್ಲ ಎನ್ನಿಸಿತು. ಆ ವೇಳೆಗೆ ಮನೆಯಾತ ಹೊರಗೆ ಬಂದು, ಒಂದು ಬುಟ್ಟಿ ತುಂಬ ತರಕಾರಿ ಕುಯ್ದು ತುಂಬಿದ. ದೊಡ್ಡ ಮಗನನ್ನು ಕರೆದು "ಲೋ, ಇದನ್ನು ಚಿಕ್ಕ ಸಾಹೇಬರ ಮನೆಗೆ ಕೊಟ್ಟು ಬಾ" ಎಂದು ಹೇಳಿದ. ಇನ್ನೊಂದು ಬುಟ್ಟಿಯನ್ನು ತರಕಾರಿಯಿಂದ ತುಂಬಿದ. ಅದನ್ನು ತಾನೇ ತೆಗೆದುಕೊಂಡು ಹೊರಹೊರಡುತ್ತಾ, ಹೆಂಡತಿಗೆ ಹೇಳಿದ, "ಲೇ, ನಾನು ದೊಡ್ಡ ಸಾಹೇಬರ ಮನೆಗೆ ಹೋಗುತ್ತೇನೆ, ಬೇಗ ಬರುತ್ತೇನೆ, ಅನ್ನ ಸಾರು ಬೇಗ ಮಾಡು" ಎಂದು ಹೇಳಿ ಹೊರಟು ಹೋದ.

✤ ✤ ✤

ಆಗ ತಿಳಿಯಿತು ನನಗೆ ದೊಡ್ಡ, ಚಿಕ್ಕ ಸಾಹೇಬರು ಏಕೆ ಆಹಾರ ಹೆಚ್ಚಾಗಿ ಬೆಳೆಯುವುದಿಲ್ಲ ಎಂದು.

——o——

ನೋಡೆ! ಇವತ್ತು ಎಂತಹ ವಿಪತ್ತು ಬಂತು ಅಂತೀಯಾ! ಅರ್ಧ ದಾರಿಯಲ್ಲಿ ಒಬ್ಬ ಕಳ್ಳ ಸಿಕ್ಕಿ, ಪ್ರಾಣ ಕೊಡುತ್ತೀಯಾ? ಪರ್ಸ್ ಕೊಡುತ್ತೀಯಾ? ಅಂತ ಗದರಿಸಿದ........

ಸರಿ! ನೀವು ಬೆಪ್ಪುತಕ್ಕಡಿಯ ಹಾಗೆ ಪರ್ಸ್ ಕೊಟ್ಟುಬಿಟ್ಟಿರಿ! ಅಷ್ಟೆ ತಾನೆ?

✤ ✤

# ಜೆ. ಎಸ್. ಪಿ.ಗೆ ಒಂದು ಮಾತು

ಲಾಲ್‌ಬಾಗಿನ ಈಶಾನ್ಯ ಮೂಲೆ. ರಾತ್ರಿ ಒಂಭತ್ತು ಗಂಟೆ. ಕಳೆದ ಶುಕ್ರವಾರ ನಾನೊಬ್ಬನೇ ಕುಳಿತಿದ್ದೆ. ಹುಲ್ಲಿನ ಮೇಲೆ ನೀಲಿ ರಶ್ಮಿಯೊಂದು ಕುಣಿದಾಡುತ್ತಿತ್ತು. ಅದರ ಸೊಬಗಿಗೆ ಮನಸೋತು ನಾನು ಎದ್ದು ನಿಂತು ಅಲ್ಲೆಲ್ಲ ತಡಕಾಡಿದೆ. ಅಷ್ಟರಲ್ಲಿ ಅದರ ಪ್ರಭೆ ಇಮ್ಮಡಿಸಿತು. ಅಲ್ಲಿನ ನಿಶ್ಶಬ್ದತೆ ಥಟಕ್ಕನೆ ಕೊನೆಗಂಡಿತು. ಹತ್ತಿರದ ಮರದ ಕೆಳಗೆ ಯಾರೋ ಬಿಸುಸುಯ್ದರು. ತನಗೆ ತಾನೇ ಏನನ್ನೋ ತೋಡಿಕೊಂಡರು. ಆಕೆಯ ಸುತ್ತ ಆ ನೀಲಿ ಬೆಳಕು ನಲಿದಾಡಿತು. ಅದೊಂದು ವನದೇವತೆ! ತಾವರೆ ದಂಟಿನ ಹಾಗಿನ ಮೈ; ದಂತ ದಿಂದ ಕಡೆದದ್ದು. ಕೇಶರಾಶಿಯಲ್ಲಿ ಮಳೆ ಹನಿಗಳು ರತ್ನದಂತೆ ಮಿಣುಕಿದುವು. ತುಸು ತುಸು ಅವಳ ಆಗಿನ ರೋದನದ ರೀತಿ.

ನಾನು ಸಮೀಪಿಸಿದಾಗ ಅವಳು ಹೆದರಿ ಎದ್ದಳು. "ಭಯಪಡಬೇಡಿ!" ಅಂದೆ. "ಇಲ್ಲ ಕ್ಷಮಿಸಿ, ನನಗೆ ಒಂದು ಬಗೆಯ...... ನಾನು ಒಂದು ವಿಷಯ ವನ್ನು ಕುರಿತು........ಒಬ್ಬರನ್ನು ನೆನೆದು........" ಅಂದಳು. ಹಾಗೆ ಹೇಳುತ್ತ ಅವಳು ಅದೇ ಮರದಲ್ಲಿ ಯಾರೋ ಚಾಕುವಿನಿಂದ ಕೊರೆದಿದ್ದ ಕೆ. ಎಸ್. ಪಿ. ಎಂಬ ಅಕ್ಷರಗಳನ್ನು ನನಗೆ ತೋರಿಸಿ, "ನೋಡಿ! ಎಷ್ಟು ಮುದ್ದಾಗಿವೆ?" ಅಂದಳು. "ಹೌದು! ಯಾರದೋ ಹೆಸರು" ಎಂದು ನಾನು ಅಂದಾಗ ಅವಳು, "ಅಯ್ಯೋ! ಎಷ್ಟು ಮುದ್ದಾದ ಹೆಸರು; ನನಗೆ ಆಗಲೇ ಗೊತ್ತು. ಅದನ್ನು ನೋಡಿದಾಗಲೇ ಗೊತ್ತು, ಆತ ಮನಮೋಹನನಾಗಿರುತ್ತಾನೆ, ಅಂತ" ಎಂದು ಹೇಳುತ್ತಾ ಎದ್ದಳು. ಕೆ. ಎಸ್. ಪಿ, ಕೆ. ಎಸ್. ಪಿ. ಎಂದು ಮೆಲ್ಲಮೆಲ್ಲನೆ ತನಗೆ ತಾನೇ ಹೇಳಿಕೊಂಡು ಅದರ ಸವಿಯನ್ನು ಹೀರಿದಳು "ಹುಂ! ಕೆ....ಎಸ್....ಪಿ....!" ಎಂದು ನಾನೂ ಪ್ರೋತ್ಸಾಹಿಸಿದೆ.

"ನನ್ನ ಪ್ರಾಣ ಸಮನಾದ ಕೆ. ಎಸ್. ಪಿ ಇಲ್ಲಿಗೆ ಯಾವಾಗ ಬರುತ್ತಾನೆ?" ಎಂದು ಅವಳು ನನ್ನನ್ನು ಕಂಬನಿ ತುಂಬಿದ ಕಣ್ಣಿಂದ ಕೇಳಿದಳು. "ಎಲ್ಲಿಗೆ? ಇಲ್ಲೇ? ನನಗೆ ತಿಳಿಯದು........ನೋಡಿ........ಅವನು....... ಯಾವಾಗಲೋ...... ಅಂತು........ಬೆಳಗ್ಗೆಯೋ........ ಸಂಜೆಯೋ........"

ಆಕೆ ಕೈ ಚಪ್ಪಾಳೆ ತಟ್ಟುತ್ತಾ ನರ್ತನಕ್ಕೆ ಪ್ರಾರಂಭ ಮಾಡಿದಳು:

ಕೋಮಲ ಕಾಯನು
ಕೆ. ಎಸ್. ಪಿ.!
ವೀರರ ನಾಯಕ
ಕೆ. ಎಸ್. ಪಿ.!

ಎಂದು ಹಾಡುತ್ತ ಹೆಜ್ಜೆ ಹಾಕಿದಳು. ಅವಳ ಮುಂದೆ ನಮ್ಮ ಭರತ ನಾಟ್ಯದ ಭಗಿನಿಯರೆಲ್ಲ ಕೇವಲ ಶಿಂಗಗಳು! "ಬೆಳಗ್ಗೆ ಬರುತ್ತಾನೆ, ಇಲ್ಲ ಸಂಜೆ ಬರುತ್ತಾನೆ,

ನನ್ನ ಕಣ್ಮಣಿ, ನನ್ನ ಮನೋನ್ಮಣಿ'' ಎಂದು ಹೇಳುತ್ತಾ, ಅವಳು ಆ ಮರದ ಸುತ್ತ ಓಡಿದಳು. ಅವಳ ಕಂಠ ಬೆಳ್ಳಿಯಲ್ಲಿ ಮಾಡಿಸಿದ ಗೆಜ್ಜೆಯ ಹಾಗೆ ಗಲಿರ್, ಗಲಿರ್, ಎಂದಿತು.

ಕಡೆಗೆ ಅವಳು ಅಲ್ಲೇ ಕುಳಿತಳು. " ನನ್ನ ಕೆ. ಎಸ್. ಪಿ ನಕ್ಕರೆ ನಕ್ಷತ್ರಗಳೆಲ್ಲ ನಗುತ್ತವೆ; ಅವನು ನಿಂತರೆ ನೆಲವೇ ಕತ್ತೆತ್ತಿ ನೋಡುವುದು; ಅವನು ನಲಿದರೆ ಆಕಾಶವೇ ಅವನನ್ನು ಬಗ್ಗಿ ನೋಡುವುದು. ನಾನು ಅವನನ್ನು ಬೇರೊಬ್ಬಳಿಗೂ ತೋರಿಸುವುದಿಲ್ಲ. ಆ ತುತ್ತ ತುದಿಯ ಮರದ ಮೇಲೆ ನಾನು ಅವನಿಗಾಗಿಯೇ ಒಂದು ಗೂಡು ಮಾಡಿರುವೆನು. ಹಾ! ಕೆ. ಎಸ್. ಪಿ ನೀನೆಂದು ಬರುವೆ? ಹೋ! ಕೆ. ಎಸ್. ಪಿ ! ಕೆ. ಎಸ್. ಪಿ.'' ಎಂದು ಅವಳು ಒರಲಿದಳು.

" ಕೆ. ಎಸ್. ಪಿ. ಯನ್ನು ಎದುರಿನಲ್ಲಿ ಕೂರಿಸಿಕೊಂಡು ನಾನು ಹಾಡುತ್ತೇನೆ. ಆದಕ್ಕಾಗಿಯೇ ನಾನು ಹಾಡು ಕಲಿತಿದೇನೆ ಕಾ ಜಾಣ ಒಂದು ಕೀರ್ತನೆ ಹೇಳಿಕೊಟ್ಟಿದೆ. ಕೋಗಿಲೆ ಒಂದು ಪಲ್ಲವಿ ಕಲಿಸಿದೆ. ನವಿಲಿಂದ ನಾಟ್ಯ ಕಲಿತಿದೇನೆ ........ಅಯ್ಯೋ! ನನ್ನ ಕೆ. ಎಸ್. ಪಿ ಎಂದು ಬರುವನು? ಅವನ ಕುರುಳನ್ನು ನಾನು ಹೀಗೆ ಮೆಲ್ಲಗೆ ತಿದ್ದಿ ಸರಿಪಡಿಸುವೆನು ಅವನ ಹಣೆಯ ಮೇಲೆ ಬೆವರಿನ ಹನಿ ನಿಂತಾಗ ಅವನು ಇನ್ನೂ ಮನಮೋಹಕವಾಗುವನು'' ಎಂದು ಹಲುಬಿದಳು " ಈ ಹೂವನ್ನು ನಾನು ಅವನಿಗೆ ಮುಡಿಸುವೆನು'' ಎಂದಳು. " ಒರಲೀದಳು ತರಳೆ'' ಎಂದು ನಾರಣಪ್ಪ ನನಗೆ ಭಾರತದಲ್ಲಿ ಹೇಳಿದ್ದ. ಅಂದು ನನಗೆ ತಿಳಿಯಿತು. ತರಳೆ ಅಂದರೆ ಎಂಥವಳು, ಅಂತ; ಒರಲುವುದು ಹೇಗೆ, ಅಂತ

ತಾಯಿ! ನಾನು ಬರುತ್ತೇನೆ........ಮನೆಗೆ ಹೊತ್ತಾಗಿ ಹೋದರೆ, ಹೆಂಡತಿ ಅನ್ನ ಹಾಕುವುದಿಲ್ಲ'' ಅಂದೆ. " ಹೋಗಿ! ಹೋಗಿ! ಕೆ. ಎಸ್. ಪಿ ಯನ್ನು ಕಳುಹಿಸಿ........ನನ್ನ ಪ್ರಾಣ ಉಳಿಸಿ'' ಅಂದಳು, ಆ ವನದೇವತೆ! ನಾನು ತಲೆಯಾಡಿಸಿದೆ.

ಅಲ್ಲಿಂದ ನಾನು ಸರಸರನೆ ಹೊರಬಂದೆ. ಒಂದು ಸಲ ನಿಂತು ಆಲಿಸಿದೆ. ಆಗ, ಗಿಡಗೆಂಟೆಗಳ ನಡುವೆ " ಕೆ. ಎಸ್. ಪಿ .......ಕೆ. ಎಸ್. ಪಿ.'' ಎಂಬ ಗಾಳಿ ತೂರಿಬರುತ್ತಿತ್ತು.

◆ ◆ ◆

ಸ್ವಾಮಿ! ತಾವು ಕೆ. ಎಸ್. ಪಿ. ಆದರೆ, ದಯವಿಟ್ಟು ಲಾಲ್‌ಬಾಗಿಗೆ ಹೋಗಬೇಡಿ. ಯಾಕೆಂದರೆ, ಆ ವನದೇವತೆಯ ಕಲ್ಪನೆಯಷ್ಟು ನೀವು ಮನಮೋಹಕವಾಗಿರಲಾರಿರಿ ಎಂಬುದು ನನ್ನ ಅನುಭವ, ಅಲ್ಲ, ಶಂಕೆ. ನೀವು ಇನ್ನೆಲ್ಲಿಗಾದರೂ ವಾಕಿಂಗ್ ಹೋಗಿ........ಮರದ ಮೇಲೆ ಮಾತ್ರ ಮನವೊಪ್ಪುವಂತೆ ಹೆಸರು ಕೊರೆಯಬೇಡಿ.

—o—

# ಪ್ರಜಾಪ್ರತಿನಿಧಿ ಸಭೆ

## ಕೆಲವು ಮಹಾವಾಕ್ಯಗಳು

(ಟೀಕಾ ಸಹಿತ)

"ಹಿಂಭಾಗದಲ್ಲಿ ಕುಳಿತಿರುವವರಿಗೆ ಮಾತನಾಡಲು ಅವಕಾಶಕೊಡಬೇಕು" (ಸದಸ್ಯರೊಬ್ಬರು)........ನಿದ್ದೆಗೇ ಅವಕಾಶವಿದೆಯಲ್ಲಾ....ಇನ್ನು ಮಾತಿಗಿಲ್ಲವೆ!

✤ ✤ ✤

"ಈ ಬಟ್ಟೆಯನ್ನು ನಾವು ನಮ್ಮ ಹೆಂಗಸರಿಗೆ ಕೊಟ್ಟರೆ, ಅವರು "ನೀವು ಬದುಕಿರುವಾಗ ನಾವಿದನ್ನು ಉಡುವುದಿಲ್ಲ" ಎಂದು ಹೇಳುತ್ತಾರೆ"

(ಉಪನ್ಯಾಸ) ಸರಿ! ಅಂತು ತೆಗಿದಿರಿಸಿಕೊಳ್ಳುತ್ತಾರೆ, ತಾನೆ?

✤ ✤ ✤

"ಈ ಅಕ್ಕಿಯನ್ನು ಬೇಯಿಸಿ ತಿಂದರೆ, ಆನೆಗಿರುವಷ್ಟು ಬಲ ಬರುತ್ತದೆ" (ಸದಸ್ಯರು)........ರೆ!

✤ ✤ ✤

"ನಾನು ಮಲೇರಿಯಾ ಹೆಡ್‌ಕ್ವಾರ್ಟರ್ಸ್ಸಿನಿಂದ ಬಂದಿದ್ದೇನೆ" (ಕಡೂರು ಸದಸ್ಯರೊಬ್ಬರು).... ಶಿವಮೊಗ್ಗ, ಮಂಡ್ಯ ಮುಂತಾದ ಹತ್ತಾರು ಕಡೆಗಳಿಂದ ವಿರೋಧ ಪ್ರಕಟನೆಗಳು ಬರಲಿವೆಯಂತೆ.

✤ ✤ ✤

"ಪೇಪರ್ ಕಂಟ್ರೋಲ್ ಎಕಾನಮಿ ಆರ್ಡರ್ ಅಂದರೆ, ಅದೇಕೆಬಂತೋ ನನಗೆ ಅರ್ಥವಾಗುವುದಿಲ್ಲ" (ಉಪನ್ಯಾಸಕ)... ಲಕ್ಷಾಂತರ ಕನ್ನಡಿಗರಿಗೂ ಅರ್ಥವಾಗಿಲ್ಲ.

✤ ✤ ✤

"ಮೈಸೂರಿನಲ್ಲಿ ಮೇಧಾವಿಗಳಿದ್ದಾರೆ. ತ್ವರಿತವಾಗಿ ಲಾ ಕಾಲೇಜನ್ನು ಸ್ಥಾಪಿಸಿ" (ವರದಿ) ಹಾಗೆ ಮಾಡಿದರೆ, ಮಂಕು ಬಡಿಯುತ್ತೆ.

✤ ✤ ✤

"ನಾವು ಈ ದೇಶದಲ್ಲಿ ಇರಬೇಕೆ, ಬೇಡವೆ, ಎಂಬ ಗತಿಯಾಗಿದೆ" (ವರದಿ) ....ಯಾರಿಗೆ? ಇವರಿಗೋ, ಅವರಿಗೋ?

" ಶಾಲೆಗಳು ಅಧಿಕವಾದಂತೆಲ್ಲ ಮಕ್ಕಳ ಸಂಖ್ಯೆಯೂ ಅಧಿಕವಾಗಿದೆ" (ಉಪನ್ಯಾಸಕರು).... ಅಯ್ಯೋ! ಗ್ರಹಚಾರವೆ? ನಮ್ಮೂರಿಗೂ ಈಗ ಒಂದು ಹೊಸ ಶಾಲೆ ಬಂತಲ್ಲಾ!

✤ ✤ ✤

" ಪ್ರಾಥಮಿಕ ಶಾಲೆಯಲ್ಲಿ ವ್ಯಾಸಂಗಮಾಡುವ ೧೦೦ ಮಕ್ಕಳಲ್ಲಿ ಎಸ್. ಎಸ್. ಎಲ್. ಸಿ. ಪಾಸುಮಾಡುವವರಿಬ್ಬರು ಮಾತ್ರ. ಈ ಇಬ್ಬರಿಗಾಗಿ ಸರ್ಕಾರದವರು ಸುಮಾರು ೮೦ ಲಕ್ಷ ರೂಪಾಯಿ ವೆಚ್ಚಮಾಡುವುದು ವಿಷಾದಕರ?" (ಉಪನ್ಯಾಸದ ವರದಿ) ... ವಿಷಾದಕರ ಅಂತ ಹೇಳಿ ಅಲ್ಲಿಗೇ ಬಿಡಬಾರದು. ತಲಾ ೪೦ ಲಕ್ಷದಂತೆ ಅವರಿಬ್ಬರಿಂದ ವಸೂಲುಮಾಡಬೇಕು.

✤ ✤ ✤

ಪ್ರಶ್ನೆ: ಲಂಚ ಕೊಡುವವರು ಯಾರ ಸಮ್ಮುಖದಲ್ಲಾದರೂ ಕೊಡುವರೆ?

ಉತ್ತರ:—ಅದು ಸರಿಯಾದ ಪ್ರಶ್ನೆಯಲ್ಲ........(ಪತ್ರಿಕಾ ವರದಿ)....ಸರಿಯಾದ ಪ್ರಶ್ನೆ ಹೀಗಿರಬೇಕು: ಲಂಚ ತೆಗೆದುಕೊಳ್ಳುವವರು ಯಾರ ಸಮ್ಮುಖದಲ್ಲಾದರೂ ತೆಗೆದುಕೊಳ್ಳುವರೆ?—ಎಂದು.

✤ ✤ ✤

" ಆ ಪತ್ರಿಕೆ ಬಿಳಿಜನರಮೇಲೆ ಕಟುತರವಾದ ಲೇಖನಗಳನ್ನು ಬರೆಯಿತು" (ಉತ್ತರ).... ಅಯ್ಯೋ ಪಾಪ! ಕಾಗದದ ಅಭಾವ!

✤ ✤ ✤

" ಪ್ರಾಥಮಿಕ ವ್ಯಾಸಂಗ ಪೂರೈಸುವವರೆಗೂ ಮಕ್ಕಳನ್ನು ಕಳುಹಿಸಿಯೇ ಕಳುಹಿಸಬೇಕು".... ಇನ್ನುಮೇಲೆ ಉಪಾಧ್ಯಾಯರು ಸ್ಕೂಲುಬಾಗಿಲು ತೆರೆದೇ ಕೂಡಬಹುದು.

✤ ✤ ✤

" ರಾತ್ರಿವೇಳೆ ದೀಪ ಇಲ್ಲದಿರುವುದರಿಂದ ಕಳ್ಳತನಕ್ಕೆ ತುಂಬಾ ಅನುಕೂಲ!" (ವರದಿ) ಪರಿಣಾಮಕಾರಿಯಾಗಬಹುದಾದ ಇಂಥ ಮಾತುಗಳನ್ನೆತ್ತಬಹುದೇ ಎಂದೊಬ್ಬರು ಕೇಳುತ್ತಾರೆ.

✤ ✤ ✤

" ಸರ್ಕಾರಿ ಕಚೇರಿಗಳ ಮುಂದೆ ನಿಲ್ಲುವ ಶಿಕ್ಷಣ ನಮಗೆ ಬೇಡಿ....ಹೆಚ್ಚು ಸೀಟುಗಳನ್ನು ಒದಗಿಸಿ" (ವರದಿ)—ಎಲ್ಲಿ? ಕಚೇರಿಗಳ ಮುಂದೆ?

✤ ✤ ✤

“ಹೊಸ ಸಾಲ ಎತ್ತಿ ಹಳೆಯ ಸಾಲ ತೀರಿಸಿ” (ಸಲಹೆ)........ನಮ್ಮ ನಮ್ಮ ಸಂಸಾರದ ಗುಟ್ಟನ್ನು ಈ ರೀತಿ ಬಯಲಿಗೆಳೆಯಬಾರದಾಗಿತ್ತು.

✤ ✤ ✤

“ಅಮಾವಾಸ್ಯೆ ಪೇಟೆಯಲ್ಲಿ ಬೆಲೆ ಹೆಚ್ಚಿರಬಹುದು; ಆದರೆ, ಪೌರ್ಣಮಿ ಪೇಟೆಯಲ್ಲಿ ಬೆಲೆ ತುಂಬಾ ಅಗ್ಗ!” (ಉತ್ತರ) ಇರಬಹುದು! ಆದರೆ, ನಾವು **ಹೋದಕಡೆಯಲ್ಲಿ ಏಕಾದಶಿ ಪೇಟೆಯೇ ಸಿಕ್ಕುತ್ತಲ್ಲಾ!**

—o—




ಬದುಕಬಲ್ಲ ದರ್ಜಿ.

# ಬೃಹತ್ ಚರಣ

—o—

ಮನೆ ಒಳಗೆ ನುಗ್ಗಿದೆ........ಕಾಲಲ್ಲಿ ಚಪ್ಪಲಿ ಇಲ್ಲ! ಅಯ್ಯೋ! ಬರೀ ಕಾಲು! ಎರಡೂ........ಬರೀ ಬರಿ! ಎಲ್ಲಿ ಬಿಟ್ಟೆ? ಎಲ್ಲೆಲ್ಲಿಗೆ ಹೋಗಿದ್ದೆ? ಸಾಯಂಕಾಲ ಸೋಮಣ್ಣನ ಸ್ನೇಹಿತನ ಜೊತೆ ಪಾರ್ಕ್‌ನಲ್ಲಿ ಓಡಾಡಿ, ಕಲ್ಲುಬೆಂಚಿನ ಮೇಲೆ ಕೂತು ಕಡಲೆಕಾಯಿ ತಿಂದು........ಅಲ್ಲಿಂದ ಮುಂದಕ್ಕೆ ಹೋದಾಗಲೂ ಕಾಲಲ್ಲಿ ಚಪ್ಪಲಿ ಇತ್ತು........ಯಾಕೆಂದರೆ, ಐದುಲೈಟ್ ಹತ್ತಿರ ನೊಳೆ ಎದ್ದಿದೆ ಅಂತ ಹಿಂದಕ್ಕೆ ನಿಂತು ಕಲ್ಲು ಆರಿಸಿ ಒಜ್ಜಿದೆ........ಹೋಟಲಿಗೆ ಹೋಗಿ ಊಟಮಾಡಿ ........ಏಕೆಂದರೆ ಅವಳು ಹೊರಗೆ! ನಾನು ಒಳಗೆ! ಓ! ಅಲ್ಲೇ ಹಾಳಾಗಿರಬೇಕು! ಅಂಥ ಜಾಗದಲ್ಲೇ ತೊಗಲು ಕಳ್ಳರೆಲ್ಲ ಸೇರುವುದು........ಹೊಸಾ ಹೊಸದು........ ಷೋಲಾಪುರದ್ದು........೩ ರೂಪಾಯಿ ಬೆಲೆ......ಒಂದು ವಾರ ಕಾಲಿಗೇನೂ ಇಲ್ಲದೆ ಕಣ್ಣು ಕಣ್ಣು ಬಿಟ್ಟು, ಆ ಮೇಲೆ ಅವಳ ನಿರ್ಬಂಧಕ್ಕೆ ತೆಗೆದುಕೊಂಡಿದ್ದು........ ಹೋಟಲಿನ್ನೂ ಮುಚ್ಚಿರುವುದಿಲ್ಲ........೧೧-೩೦........ಅಂದರೆ ಹಿಂದಿನ ೧೦-೩೦ ........ಇರಬಹುದು........ಶೇಷಗಿರಿ ಮನೆಯಲ್ಲಿ ಅರ್ಧ ಗಂಟೆಗಿಂತ ಹೆಚ್ಚು ಇಸ್ಪೀಟ್ ಆಡಿರಲಾರೆ........

ಸರಿ! ಎದುರು ಮನೆ ಎಂಕಣ್ಣನನ್ನು ಎಬ್ಬಿಸಿ ಸೈಕಲ್ ಸಾಲ ಇಸುಕೊಂಡು ದೀಪ ಹೊತ್ತಿಸಿ ನನ್ನ ವರ್ತನೆ ಹೋಟಲಾದ "ವೆಂಗಾಯ ವಿಲಾಸ"ಕ್ಕೆ ತುಳಿದೆ. ಅವನೋ ಪರಮ ಸಿಡುಕ. ಇನ್ನೇನು ಗೋಮಯವಿಕ್ಕಿ ಗೊರಕೆ ಹೊಡೆದೇನೆ, ಅಂತ ಆಕಳಿಸುತ್ತಾ ಇದ್ದ. "ನನ್ನ ಚಪ್ಪಲಿ ಬಿಟ್ಟಿದ್ದೆ, ಸ್ವಾಮಿ, ಇಲ್ಲಿ!" ಅಂತ ನಾನು ಕೈ ಮುಗಿದೆ. "ಚಪ್ಪಲಿ ಹುಡುಕಿಕೊಂಡು ಅಡಿಗೆ ಮನೆಗೇ ನುಗ್ಗುತ್ತೀರಲ್ಲಾ! ನಾನೇನು ಅದನ್ನ ಒಲೆಯೊಳಗಿಟ್ಟಿದ್ದೇನೆಯೆ?" ಅಂತ ಆತ ಗದರಿಸಿದ. ಆತನನ್ನು ಹೊರಗೆ ಕರೆದುಕೊಂಡು ಬಂದು, ಷೋಲಾಪುರದಿಂದ ಹಿಡಿದು ನಮ್ಮ ಮನೆ ಹಜಾರದವರೆಗಿನ ಆ ಪಾದರಕ್ಷಾ ಪುರಾಣವನ್ನು ವಿವರಿಸಿದೆ.

ಆಗ ಅವನಿಗೆ ಮೆದುಳಿನ ಮಂಕು ಹರಿಯಿತು. "ನಿಮ್ಮ ಚಪ್ಪಲಿಗಳನ್ನು ಯಾರೂ ದೋಂಗಿಲ್ಲ. ಖಾಯಂ ಊಟಗಾರರೊಬ್ಬರು ಅದನ್ನ ಕಾಲಿಗೆ ತಗುಲಿಸಿಕೊಂಡು ಹೋಗಿದಾರೆ" ಅಂದ. ಕಂಗಾಲಾದ ನನ್ನ ಅಂಗಾಲುಗಳು ಚೇತರಿಸಿಕೊಂಡುವು. ಹಿಮ್ಮಡಿಗಳು ಹೆಮ್ಮೆಯಿಂದ ಮಿಡಿದುವು. "ಎಲ್ಲಿ? ಅವರ ಹೆಸರೇನು ಅವರ ಮನೆ ಎಲ್ಲಿ?" ಎಂದು ಆತುರಿಸಿದೆ.

"ಇಲ್ಲೇ! ಇದೇ ಬೀದಿ ಕೊನೇ, ಮನೆ, ಔಟ್‌ಹೌಸ್‌ನಲ್ಲಿದಾರೆ........ಅವರ ಹೆಸರು ವಾಮನರಾವ್ ಅಂತ........ಅವರು ಊಟ ಮುಗಿಸಿ ಕೈ ತೊಳೆದು ಇಲ್ಲಿಗೆ

ಬಂದಾಗ, ನಿಮ್ಮ ಚಪ್ಪಲಿ ಮಾತ್ರ ಇಲ್ಲಿ ಇತ್ತು........ಅವರದೂ ಪರಾರಿ, ಪರೋಪಕಾರಿಯಾಗಿತ್ತು........ಅದಕ್ಕವರು ಸ್ವಾಮಿ! ಎಲ್ಲೋ ಬದಲಾವಣೆಯಾಗಿರಬೇಕು ........ನನ್ನದೂ ಕೊಲ್ಹಾಪುರ........ಆದರೆ, ಇದು ಯಾರೋ ಬೃಹಚ್ಚರಣದವರದು ........ಬಂದರೆ ಹೇಳಿ" ಅಂದಿದ್ದರು, ನೀವೀಗ........"

ಅವರ ಮಾತು ಮುಕ್ತಾಯವಾಗುವುದನ್ನು ನಿರೀಕ್ಷಿಸದೆ, ನಾನು ಗಾಡಿ ಹತ್ತಿ ತುಳಿ ತುಳಿದು ಮುಂದುವರಿದೆ. ಬಂಗಲಿಯ ದಿಡ್ಡಿಬಾಗಿಲಿಗೇನೆ ಬೀಗ ಹಾಕಿ ಕೀಲಿಸಿದರು! ಇನ್ನು ನಾನು ಗೋಡೆ ಹಾರಿ, ಅಲ್ಲೇ ಬೊಗಳುತ್ತಿದ್ದ ನಾಯಿ ಬಾಯಿಗೆ ಕಾಲಿನ ಮಾಂಸ ತಿನ್ನಿಸದೆ, ಔಟ್ ಹೌಸ್‌ನವರನ್ನ ಎಬ್ಬಿಸಿ....... ಬೇಡ, ಅಂತ ತೀರ್ಮಾನಿಸಿ, ಮನೆಗೆ ಹಿಂತಿರುಗಿದೆ.

ಆ ರಾತ್ರಿಯೆಲ್ಲ ನನಗೆ ಪಾದರಕ್ಷೆಗಳ ಕನಸು! ನಂದಿಗ್ರಾಮ, ಬೇಲೂರು ದೇವಸ್ಥಾನದಲ್ಲಿಟ್ಟಿರುವ ದೇವರ ಪಾದುಕೆಗಳು, ಒಂದೇ ಪಾದರಕ್ಷೆಯನ್ನು ಧರಿಸಿ ಓಡುವ ಜೇಸನ್ ಮತ್ತು ಬೋಧಿ ಧರ್ಮದ ಸ್ವರೂಪಗಳು,—ಹೀಗೆ ನಾನಾ ರೀತಿಯ ಸ್ವಪ್ನಗಳು!

ಬೆಳಗ್ಗಾಗುತ್ತಲೂ ಕಾಫಿಗೂ ಕಾಯದೆ, "ವೆಂಗಾಯ ವಿಲಾಸ" ದ ಬೀದಿಗೆ ಬಿಜಯಮಾಡಿದೆ. ವಾಮನರಾಯರ ಔಟ್ ಹೌಸಿಗೆ ಪ್ರವೇಶ ಮಾಡಿದೆ. ಚಪ್ಪಲಿ ಎಂಬ ಮಾತು ಕಿವಿಗೆ ಬೀಳುತ್ತಲೂ ಅವರ ಮುಖ ಅರಳಿತು. ಒಳಗಿಂದ ನನ್ನ ಪ್ರೇಮದ ಪುತ್ಥಳಿಗಳನ್ನು ತಂದರು. "ನನ್ನ ಚಪ್ಪಲಿಗಳು ಎಲ್ಲಿ?" ಎಂದರು.

ಒಳ್ಳೆ ಚೆನ್ನಾಯಿತಲ್ಲಾ! ಓ ಹೊ ಹೊ! ಅವರ ಚಪ್ಪಲಿ ನನ್ನ ಹತ್ತಿರವೆಲ್ಲಿ ಬಂತು? ನನಗೆ ರೇಗಿತು. "ಅಲ್ರಿ! ನಿಮ್ಮ ಪಾದರಕ್ಷೆಗಳು ನನ್ನ ಪಾದಗಳನ್ನು ರಕ್ಷೆಮಾಡುವ ಹಾಗಿಲ್ಲ. ನೋಡಿಕೊಳ್ಳಿ. ನಿಮ್ಮ ಹೆಸರು ವಾಮನ! ನಾನೋ ತ್ರಿವಿಕ್ರಮ! ನನ್ನ ಜಾತಿ ಬೃಹಚ್ಚರಣ. ನಿಮ್ಮ ಕಾಲಿನ ಸೈಜೆಷ್ಟು?" ಅಂದೆ. "ಐದು" ಅಂದರು. ನಾನು ಗೆದ್ದೆ. "ನನ್ನದು ಏಳೂವರೆ!" ಅಂದೆ. ನಿಮ್ಮ ಗೊರಸಿಗಿಂತ ತದರ್ಧ ದೊಡ್ಡದಾದ ನನ್ನ ಗೊರಸನ್ನ ನಾನು ಹೇಗೆ ಅದರೊಳಕ್ಕೆ ತುರುಕಲಾದೀತು........ಯೋಚನೆ ಮಾಡಿ" ಅಂದೆ. ಅವರು ಯೋಚನೆ ಮಾಡಿದರು........ಮಾತಾಡದೆ ಮನೆಯೊಳಕ್ಕೆ ಹೋಗಿ ಬಾಗಿಲು ಹಾಕಿದರು

ಡಾನ್‌ಸಿಗ್ ನಗರವನ್ನು ಹಿಂದಕ್ಕೆ ಪಡೆದ ಹಿಟ್ಲರನಂತೆ ನಾನು ಮನೆಗೆ ಹಿಂತಿರುಗಿದೆ. ವಾಮನರಾಯರಿಗಾದ ವಿಷಾದವನ್ನು ಅಡಿಗೆ ಮನೆಯಲ್ಲಿ ಕೂತು ವಿವರಿಸಿದೆ. ಅವಳೂ ಬಿದ್ದುಬಿದ್ದು ನಕ್ಕಳು. ಆಗ ತಾನೆ ಅವಳೂ ಸ್ನಾನ ಮುಗಿಸಿ ಬಂದಿದ್ದಳು. ಆ ಹೊತ್ತಿನ ಅಡಿಗೆ ಬಹು ರುಚಿಯಾಗಿತ್ತು. ಕಳೆದು ಹೋದ ಮೇಲೂ ಕೈಗೆ ಬಂದ, ಅಲ್ಲ ಕಾಲಿಗೆ ಬಂದ ಚಪ್ಪಲಿಗಳನ್ನು ಸ್ವಾಗತಿಸಲು ನಾವು ಒಂದಿಷ್ಟು ಚಿತ್ರಾನ್ನವನ್ನೂ ಮಾಡಿದ್ದೆವು........

ಊಟಮಾಡಿ, ಇಬ್ಬರೂ ಎಲೆ ಅಡಿಕೆ ಜಗಿಯುತ್ತಿರುವಾಗ, ಹಾಳು ಶೇಷಗಿರಿ "ವಿಶ್ರಮಾ! ವಿಶ್ರಮಾ!" ಅಂತ ಊಳಿಟ್ಟ. "ಮನೆಯಲ್ಲಿಲ್ಲ" ಅಂತ ಹೇಳಿ ಓಡಿಸಿಬಿಡೋಣ ಅಂತ ಅವಳೇ ಎದ್ದಳು "ನೀನು ಬೇಡ! ನಾನೇ ಹೇಳುತ್ತೇನೆ" ಅಂತ ನಾನೆದ್ದೆ. ಅರೆತೆರೆದ ಕಿಟಕಿಯಿಂದ ಇಣಿಕಿ ನೋಡಿದೆ.

ಇದೇನಿದು ಗ್ರಹಚಾರ! ಶೇಷಗಿರಿ ಕೈಲಿ ಎರಡು ಹೊಸಾ ಹೊಸ ಚಪ್ಪಲಿಗಳು! "ಏನೋ ಇದು! ನಿನ್ನೆ ರಾತ್ರಿ ಇಸ್ಪೀಟು ಮುಗಿಸಿ ಹೊರಟಾಗ ಇದನ್ನ ನನ್ನ ಮನೆಯಲ್ಲೇ ಬಿಟ್ಟು ಹೋಗೋದೇ?" ಅಂದ ಶೇಷಗಿರಿ!

ಕೈಗೆ ತೆಗೆದುಕೊಂಡು ನಂಬರ್ ನೋಡಿದೆ. '೫' ವಾಮನರಾಯರ ಕಾಲಿನ ಸೈಜು! ಈಗ ಇದನ್ನೇನು ಮಾಡುವುದು? ವಾಮನರಾಯರ ಮನೆಗೆ ಹೋಗಿ ಅವರ ಕಾಲು ಹಿಡಿದು ಕ್ಷಮೆ ಬೇಡಿ, ಒಪ್ಪಿಸಿಬರುವುದೇ? ಅಥವಾ........?

ಧರ್ಮಸಂಕಟ!

—ತ್ರಿ. ವಿ.



ವಿದ್ಯಾವತಿಯರಾದ ತರುಣಿಯರನ್ನು ಮದುವೆಯಾಗಬೇಕೆಂಬುದೇ ಆಧುನಿಕ ಬ್ರಹ್ಮಚಾರಿಗಳ ಕೊರಗು!........ಆಧುನಿಕ ವಿವಾಹಿತರಿಗೂ ಅದೇ ಕೊರಗು!

✤ ✤ ✤

ಬೇಬಿ ಶಿಖಾಮಣಿ ಎಂಬ ಸಿನಿಮಾ ತಾರೆಗೆ ೨೫ ವರ್ಷ ತುಂಬಿಲ್ಲವೆಂಬುದು ಯಾರೋ ಬೇಜವಾಬ್ದಾರಿ ಬಾತ್ಮೀದಾರ ಪ್ರಚುರ ಪಡಿಸಿದ ಸುದ್ದಿಯಂತೆ.

✤ ✤ ✤

"ಸಸ್ಯಾಹಾರವೇ ಸೌಂದರ್ಯಕ್ಕೆ ಸಾಧನ" (ಜಾಹಿರಾತು) ಒಂಟೆಯನ್ನು ನೋಡಿದ ಮೇಲೆ ನಮಗೆ ನಂಬಿಕೆ ಬರುತ್ತಿಲ್ಲ

✤ ✤ ✤

# "ತಾರೆ"ಗಳ ಮರುಮಾತು

("ರಾಘವ"ನ ಹಕ್ಕಿ ಹಾಡೊಂದನ್ನು ಕುಕ್ಕಿ)

---

ತಾರೆಗಳೆ! ಚಿತ್ತ್ರರದ ಸಾಲಿನಲಿ ಮೆರೆವ ಹೆಣ್ಣುಗಳೆ!
ನೀವು ಕಂಡಿಹುದೇನು ನಿಮ್ಮ ಬದುಕಿನಲಿ?
ಸಾರಿ ಸುರುಳುವುವು ಫಿಲ್ಮುಗಳು ಎನಿತೆನಿತೊ ನಿಮ್ಮ ನೆರಳಿಂದೆ!

✤ ✤ ✤

ಕಂಡುದನು ಹೇಳುವೆವು, ಕಲ್ಪನೆಯ ಕಥೆಯಲ್ಲವೆಮ್ಮ ಕಥೆಯು!
ಮೇಲೆ ರಂಭೆಯರಂತೆ ಶೃಂಗಾರ, ಬೇಟ
ಸೊಗದ ಮೊಗ್ಗಿನ ಎಳಸು; ಒಳಗೆ ಹೊಲಸು!
ಎಲ್ಲೆಲ್ಲು ಸುಳ್ಳಾಟ ಬರಿಯ ಕಪಟ
ಬಲು ಕೀಳುತನ, ಕಪಟ
ನಮ್ಮ ಈ ಆಟ,—
ಕಂಡಿಹೆವು ಇದನೆಲ್ಲ ನಮ್ಮ ಬದುಕಿನಲಿ.

✤ ✤ ✤

ಹಾಳು ದಿಗ್ದರ್ಶದಲಿ ಶೂನ್ಯ ನಿರ್ದೇಶದಲಿ ಜೋಳಲಿ ನೀವು
ಏನನಾಲೋಚಿಸುತ ಕಾಲಕಳೆಯುವಿರಿ?
ಭೀರುತ್ವದಲಿ ಮುಳುಗಿ ರೇಗಾಡದೆಯೆ ನೀವು ಏನಮಾಡುವಿರಿ?

✤ ✤ ✤

ನಿಮಗೆ ರುಚಿಸುವುದೆಲ್ಲ, ಇವರು ನಡೆಸುವುದೆಲ್ಲ, ಯೋಚಿಸುತ್ತಿಹೆವು
ಸಾಲುಪೀಡೆಗಳಂತೆ ಒಂದಾಗುತೊಂದು
ಚಕ್ರಾತಿ ವಕ್ರಗಳು ಇಲ್ಲಿ ಕುಣಿಯುತಿವೆ—
ಜಗಳವಾವರಿಸಿಹುದು ಸ್ಟುಡಿಯದ ತುಂಬ!
ಹಾಸ್ಯ ರಾಕ್ಷಸಗಂಜಿ
ಓಡಿಹಳು ಶಾಂತಿ,
ಕಲೆಯ ಕಾಂತಿ!
ನಮ್ಮ ಬಳಿಸಾರುವಳೆ? ಎಂದು ಯೋಚಿಸುತಿಹೆವು.

✤ ✤ ✤

ಕ್ಷಣಕೊಮ್ಮೆ ಏಕಿಂತು ಕಿರಿಚಿ ಕರ್ಣ್‌ಮರೆಯಾಗಿ ಮತ್ತೆ ತೊದಲಿ
ಅಶ್ಲೀಲ ದಾಳದಲಿ ಬಿದ್ದು ಮುಳುಗುವಿರಿ?
ಮನವನಾ ವರಿಸಿರುವೀ ಮಂಕಾವುದು? ತಿಳಿಗಣ್ಣು ಬಿಡಲು ಭಯವಾವುದು?

✦ ✦ ✦

ಕಲೆಯು ಮುಂದಿನ ಬಾಳು ಎಂತೊ ಏನೋ ಎಂದು ನಡುಗುತಿಹೆವು.
ಹಣದ, ಹೆಸರಿನ, ಹುಟ್ಟು—ಸಿನಿಮ ಕಸಬಿನ ಗುಟ್ಟು;
ಅದರ ಗಣಿಯನು ಶೋಡೆ ನಾವು ಹಟತೊಟ್ಟು
ಹೆಣಗುತಿರುವೆವು; ನಮ್ಮ ಬಳಿಸದ್ದಿಗೇ
ಹಾರುತಿರುವಿರಿ ನೀವು—
ನಿಮಗಿಲ್ಲ ಗಟ್ಸು!
ಗೆರೆ ಮೀರಿ ಬರುತಿಹಿರಿ,
ಋಣಮಾಡಿ ತೆರುತಿಹಿರಿ!
ಸರಿಯಾದುದಲ್ಲ ವಿದು!
ನಿಮ್ಮ ಕುಡಿದಾಟಕ್ಕೆ ನಮ್ಮ ಕುಣಿದಾಟ!
ನಮ್ಮ ನೆಗೆದಾಟಕ್ಕೆ ನಿಮ್ಮ ನಗೆಯಾಟ!
ನಿಮ್ಮ ಬುದ್ಧಿಯ ಮಟ್ಟ
ನಮ್ಮ ಸಿದ್ಧಿಯ ಮಟ್ಟ!
ಎಂದು ಬರುವುದೊ ಏನೊ ನಿಮಗೆ ಭ್ರಮೆಯ ಭಂಗ?
ಎಂದು ಬಿಡುವಿರೊ ಏನೋ ಕಿಲುಬಿದೊಲವಿನ ಸಂಗ?
ಎಂಬ ಶಂಕೆಗೆ ಸಿಲುಕಿ ತಿಳಿಗಣ್ಣು ಬಿಡುತಿಹೆವು!—
ಸಾಕು! ನೋಟಕ! ನಿನಗೆ ಸಾವಿರ ನಮಸ್ಕಾರ!

—ಪಾಠಾ.

———o———

ಬಂದವರ ಕಿಸೆಯಿಂದ ಕಾಸುಕದ್ದನೆಂಬ ಆಪಾದನೆ ಹೊರಿಸಿ, ಹೋಟಲು ಮಾಲೀಕರೊಬ್ಬರು ಯಾರನ್ನೋ ಹಿಡಿದು ಪೋಲೀಸರಿಗೊಪ್ಪಿಸಿದಾಗ, ಅವನು ಹೇಳಿದನಂತೆ: ಸ್ವಾಮಿ! ನಾನಲ್ಲ ಕಳ್ಳ.

✦ ✦ ✦

ರಸ್ತೆಯೇ ತಮ್ಮದು ಎಂಬ ಜಂಭದಿಂದ ಕೆಲವರು ಕಾರು ನಡೆಸುತ್ತಾರೆ (ಪತ್ರಿಕೆಯ ಟೀಕೆ) ಕಾರೇ ತಮ್ಮದು ಎಂಬ ಜಂಭದಿಂದ ಕೆಲವರು ಅದನ್ನು ನಡೆಸುತ್ತಾರೆ. (ನಮ್ಮ ಟೀಕೆ)

# ಅನರ್ಥಕೋಶ

---

**ಔಷಧಿ**—ಸಾಯುವವರ ಬಾಯಿಗೆ ಡಾಕ್ಟರುಗಳು ಬಿಡುವ ರಂಗೋದಕ.

**ಅಂತಸ್ತು**—ಅಂತಃಕರಣದ ಅಶುಚಿಯಿಂದ ಉಂಟಾಗುವ ಒಂದು ರೀತಿಯ ಖಾಯಿಲೆ.

**ಕಗ್ಗ**—ಆಧುನಿಕ ಸಾಹಿತ್ಯಕ್ಕೆ ಪ್ರಾಚೀನರು ಹಾಕಿರುವ ನಾಮ.

**ಕತ್ತೆ**—ಮಕ್ಕಳನ್ನು ಮುದ್ದಾಡಿಸಲು ಅವುಗಳ ಕಾರಣ ಕರ್ತರು ಉಪಯೋಗಿಸುವ ಪದ; ಕುದುರೆಯ ನಂಟರಿಗೂ ಇದೇ ಹೆಸರು.

**ಕಪಟ**—ಚುನಾವಣೆ ಕಾಲದಲ್ಲಿ ಎದುರು ಪಕ್ಷದವರು ಅನುಸರಿಸುವ ನೀತಿ.

**ಕವರು**—ವ್ಯಾಪಾರಸ್ಥರು 'ಬಿಲ್ಲು'ಗಳನ್ನು ಇಟ್ಟು ರವಾನಿಸುವ ಬತ್ತಳಿಕೆಗಳು.

**ಕಸ**—ರಸ ಎಂಬ ಪದಕ್ಕೆ ಪ್ರಾಸವೊದಗಿಸುವ ಮಾತು.

**ಕಳ್ಳು**—ಇದನ್ನು ಸವಿಯುವವರನ್ನು ಕಂಡರೆ, ಸವಿಯದವರಿಗೆ ರೇಗುತ್ತೆ.

**ಕೊಸು**—"ವಿಠ್ಠಲಾಚಾರರ ಪುರಾಣ ತೊಟ್ಟಿಲಲ್ಲೇ" ಎಂಬ ಗಾದೆ ಹುಟ್ಟಿದ್ದು ಈ ವಸ್ತುವಿನಿಂದಲೇ.

**ಕೋತಿ**—ನಮ್ಮ ವಂಶ ವೃಕ್ಷದ ಮೇಲೆ ನೇತಾಡುವ ಪ್ರಾಣಿ.

**ಕೋಳಿ**—ಇದನ್ನು ಕದಿಯುವವರೂ ನಮ್ಮಲ್ಲಿ ಇದಾರೆ.

**ಕಂಠ**—ಶಂಖವಾದ್ಯ ಮಾಡಲು ನಮಗೆ ದೇವರು ಕೊಟ್ಟಿರುವ ಸಾಧನ. ಕವಿಗಳು ಇದನ್ನು ಶಂಖವೆಂದೇ ಹೊಗಳುತ್ತಾರೆ.

**ಗಡಿ**—ಗಡಿಬಿಡಿಗಳಿಗೆಲ್ಲ ಇದೇ ಮೂಲ.

**ಗಂಡ**—ಸಾಕು ಪ್ರಾಣಿಗಳ ಪೈಕಿ ಅತ್ಯಂತ ಸಾಧುವಾದದ್ದು.

**ಗುಡಿ**—ದೇವರನ್ನು ಕತ್ತಲೆ ಕೋಣೆಯಲ್ಲಿಟ್ಟು ಬಾಗಿಲು ಹಾಕುವ ಸ್ಥಳ.

**ಗೋಮಯ**—"ಇದೇ ಅಂತರಂಗ ಶುದ್ಧಿ! ಇದೇ ಬಹಿರಂಗ ಶುದ್ಧಿ."

**ಗೋಲಿ**—ಹುಡುಗರೂ, ಹೀರೋಗಳೂ ಆಟಕ್ಕೆ ಉಪಯೋಗಿಸುವ ಪದಾರ್ಥ.

—ಖಾರಂತ.

---

# ನಾವು ಬಿದ್ದ ಬೇಸ್ತು

( ಕಲ್ಪನಾ ಚಿತ್ರ )

ಈಗ ಐದಾರು ವರ್ಷಗಳ ಹಿಂದಿನ ಮಾತು; ಅಂದರೆ ನಾವು ಮಲ್ಲೇಶ್ವರದಲ್ಲಿ ವಿಶಾಲವಾದ ಕಾಂಪೌಂಡಿನೊಳಗೆ ಗುಲಾಬಿ, ಮಲ್ಲಿಗೆ, ಸಂಪಿಗೆ, ಸೂರ್ಯಕಾಂತಿ, ಘಟಿಕ ಇತ್ಯಾದಿ ಪುಷ್ಪೋದ್ಯಾನದಿಂದ ಕೂಡಿದ ದೊಡ್ಡ ಬಂಗಲೆಯನ್ನು (ನಮ್ಮ ಸ್ವಂತ ಬಂಗಲೆಯನ್ನು) ಸೂರುವುದಕ್ಕೆ ಮುಂಚೆ ನಡೆದದ್ದು.

ಆಗ ನನಗೆ ಹೂವಿನ ಗಿಡಗಳೆಂದರೆ ಪ್ರಾಣ. ನನ್ನ ಜತೆಗೆ ನಮ್ಮ ಅತ್ತಿಗೆಯ ಸಹಾಯವಿದ್ದುದರಿಂದ, ದೊಡ್ಡ ಕಾಂಪೌಂಡಿನಲ್ಲಿ, ಬೇಕು ಬೇಕಾದ ಹಾಗೆ ಹೂವಿನ ಗಿಡಗಳನ್ನು ನೆಟ್ಟು, ಬೆಳೆಸಿ, ಮನೆಯ ಮುಂಭಾಗವನ್ನೆಲ್ಲಾ ನಂದನವನಕ್ಕಿಂತ ಮಿಗಿಲಾಗಿ ಮಾಡಿದ್ದೆ. ಅತ್ತಿಗೆ ನಿತ್ಯವೂ ಆ ಹೂವಿನ ಗಿಡಗಳ ಪೋಷಣೆಯನ್ನು ಮನಸ್ಸಿಟ್ಟು ಮಾಡುತ್ತಿದ್ದುದರಿಂದ, ನಮ್ಮ ಬೀದಿಯವರಿಗೆಲ್ಲಾ ನಮ್ಮ ಗಾರ್ಡನ್ನಿನ ಮೇಲೆಯೇ ಕಣ್ಣು. ಆದರೆ, ಯಾವ ಪ್ರಾಣಿಯ ದೃಷ್ಟಿಯೂ ಬೀಳದೆ ಸಂತೋಷ ವಾಗಿ ಕಣ್ಣರಳಿಸಿ ನಗುತ್ತಿತ್ತು ಪ್ರತಿಯೊಂದು ಹೂಗಿಡವೂ ಕೂಡ.

ನಮ್ಮ ಬೀದಿಗೆ ಮುಂದಿನ ಬೀದಿಯಲ್ಲಿ ಒಬ್ಬ ಲಾಯರು; ಹೆಸರು ಸುಬ್ಬ ರಾವ್. ಜೊತೆಗೆ ಹೈಕೋರ್ಟ್ ಅಡ್ವೊಕೇಟ್ ಕೂಡ. ಈತನಿಗೆ ದೈವಭಕ್ತಿ ಹೆಚ್ಚು, ಹೆಚ್ಚುತ್ತಾ ಬಂದಹಾಗೆಲ್ಲಾ, ಇಂತಹ ಪುಷ್ಪೋದ್ಯಾನಗಳ ಭೇಟಿಯೂ ಹೆಚ್ಚುತ್ತಿತ್ತು. ತಮ್ಮ ಬೀದಿಯಲ್ಲಿಯೇ ಒಂದೆರಡು ಮನೆಗಳಲ್ಲಿ ದಾಸವಾಳ, ತುಂಬೆ ಹೂಗಳನ್ನು ದೇವರಿಗೋಸ್ಕರ ಅಪಹರಿಸಿ ಒಂದೆರಡು ಸಲ ಕಲ್ಬೀರಿಸಿ ಕೊಂಡ ಗಂಡುಗಲಿಗಳಾಗಿದ್ದರೂನ್ನಿ. ಇಂತಹ ಪುಣ್ಯಾತ್ಮನಿಗೆ ನಮ್ಮ ನಂದನವನ ಕಣ್ಣಿಗೆ ಬಿದ್ದದ್ದು, ನಮ್ಮ ಕುತ್ತಿಗೆಯನ್ನೇ ನಾವೇ ಹಿಸುಕಿಕೊಳ್ಳುವಷ್ಟು ಸಂಕಟಕ್ಕೆ ಆರಂಭವಾಯಿತು.

ಮೊದಮೊದಲು, ಎಲ್ಲಾ ಹೂ ಗಿಡಗಳಲ್ಲಿಯೂ ಸ್ವಲ್ಪ ಸ್ವಲ್ಪ ಹೂವುಗಳು ಇವರ ಪಾಲಿಗೆ ಹೋಗುತ್ತಿದ್ದುವು. ಆದರೆ ನಾವು ಯಾರೂ ಅದನ್ನು ಗಮನಿಸಲೇ ಇಲ್ಲ. ಸ್ವಲ್ಪ ದಿನಗಳಾದ ಮೇಲೆ, ನಾವು ಏಳುವ ಹೊತ್ತಿಗೆ, ಪ್ರತಿ ಗಿಡವೂ ಬೋಳು ಬೋಳಾಗಿ ಕಂಡುಬರುತ್ತಿತ್ತು. ನಾವು ನಿತ್ಯವೂ ಕಷ್ಟಪಟ್ಟು ಗಿಡಗಳ ಪೋಷಣೆ ಮಾಡಿದರೂ, ಅದರ ಫಲ ಸೋಮಾರಿಯೊಬ್ಬನ, ಕಡುಪಾಪಿಯೊಬ್ಬನ ಪಾಲಾಗುತ್ತಿದೆಯಲ್ಲಾ ಎಂದುಕೊಂಡು, ಖಂಡಿತವಾಗಿಯೂ ಹೊತ್ತಿಗೆ ಮುಂಚೆ ಎದ್ದು ಈ ಕಳ್ಳನನ್ನು ಪತ್ತೇ ಹಚ್ಚಿಬಿಡಬೇಕೆಂದು, ನಮ್ಮ ಅಜ್ಜಿಯವರನ್ನೇ ನೇಮಿಸಿದ್ದಾಯಿತು. ಅವರಿಂದ ರಿಪೋರ್ಟ್ ಬಂದದ್ದು—' ಲೋ, ರಾಜೂ!

ನಿಮ್ಮಣ್ಣನ ಸ್ನೇಹಿತಾಂತ್ಕಾಣುತ್ತೆ. ಆ ಲಾಯರ್ ಸುಬ್ಬರಾಯ್ರು ಕಣೋ. ದೇವರ ಪೂಜೇಗೋ ಏನೋ, ಪಾಪ ಹೂ ಕಿತ್ಕೊಳ್ತಾನೆ. ನಿಮ್ಮ ಯೋಗ್ಯತೇಗೆ ದೇವ್ರೂ, ದಿಂಡ್ರೂ, ಸಂಧ್ಯಾವಂದನೆ ಇಲ್ದಿದ್ರೂ, ಆ ಬ್ರಾಹ್ಮಣ ಮಾಡ್ತಿದ್ದಾನಲ್ಲಾ ನಿಷ್ಠೆಯಾಗಿ, ಹೋಗ್ಲಿ ಬಿಡಿ"—ಅಜ್ಜಿಯಿಂದ ಹೀಗೆ ಅನ್ನಿಸಿಕೊಂಡದ್ದೂ ಆಯಿತು. ನನ್ನ ತಂಗೀಗೂ, ಅತ್ತಿಗೇಗೂ ತಾವು ಪ್ರತಿನಿತ್ಯ ಅಲಂಕರಿಸಿಕೊಳ್ಳುತ್ತಿದ್ದ ಪುಷ್ಪಗಳೆಲ್ಲಾ ಪರರ ಪಾಲಾಗುತ್ತಿದೆಯಲ್ಲಾಂತ ಸಂಕಟ ಇದಕ್ಕೇನಾದ್ರೂ ಉಪಾಯ ಹೂಡಲೇ ಬೇಕೂಂತ ನಾನೂ, ಅತ್ತಿಗೆ ನಿಶ್ಚಯಿಸಿಕೊಂಡ್ವಿ—"ಇವತ್ತಿಂದ ಜಾಕೀ (ನಮ್ಮ ನಾಯಿ)ನ ಬಿಚ್ಚಿ, ಗಾರ್ಡನ್ನಲ್ಲಿ ಬಿಟ್ಬಿಡೋದು. ಅದ್ಬೊಗಳ್ಳಿಕ್ಕೆ ಪ್ರಾರಂಭ ಮಾಡ್ತಾಂದ್ರೆ, ಈ ಲಾಯ್ರು ಒಂದೇ ದೌಡ್ನಲ್ಲಿ ಓಡ್ಬೇಕ್ಬೇ"ಂತ ಅಂದ್ಕೊಂಡು ಹಾಗೆಯೇ ಮಾಡಿದೆವು.

ಎರಡು ಮೂರು ದಿನಗಳು ನಮ್ಮ plan ಪ್ರಕಾರ ಒಂದು ಹೂವೂ ಕಳ್ಳತನವಾಗದೆ ನಮ್ಮ ನಮ್ಮಲ್ಲೇ ಹಿಡಿಸಲಾರದಷ್ಟು ಆನಂದವಾಯಿತು. ಮೂರು ದಿನಗಳು ಕಳೆದ ಮೇಲೆ ಯಥಾಪ್ರಕಾರ ಪುಷ್ಪಚೌರ್ಯ ಪ್ರಾರಂಭಿಸಿತು. ಇದೇನಿದು? ನಮ್ಮ ಜಾಕೀನೂ ನಮ್ಮ್ಕೈ ಬಿಡ್ತೇ ಹೇಗೇಂತ ಗಾಬರಿಯಾಗಿದ್ಕೊಂಡೆ. ನಮ್ಮತ್ತಿಗೆ "ಎಲ್ಲೋ ನಾಯಿನ್ಬಿಚ್ಚಿ ತಿರುಗಾಡ್ಲಿಕ್ಬಿಡ್ಲಿಲ್ಲಾಂತ್ಕಾಣುತ್ತೆ"ಂತ ನನ್ನನ್ನೇ ದಬಾಯಿಸಿದರು. ಆದರೆ, ನಡೆದ ವಿಷಯ ಬೇರೆ. ಲಾಯರ್ ಮುಂದೆ ನಾವೆಲ್ಲಾ ಬರೀ ಕ್ರಿಮಿಗಳೇ. ಅವರಿಗಿರೋ ಬುದ್ಧಿ ನಮಗೆಲ್ಲಿ ಬರಬೇಕು? ಆ ಬ್ರಾಹ್ಮಣ ಮೊನ್ನೆಯಿಂದ್ಲೂ, ನಮ್ಮ ಜಾಕೀಗೆ ಬೆಳಗ್ಗೆ ಚೌರ್ಯಕ್ಕೆ ಬಂದೇಟ್ಗೆ, breakfast arrange ಮಾಡಿರೋವಾಗ್ಯೆ, ನಮ್ಜಾಕೀ ನಾಸ್ಟೇಲಿದ್ದಾಗೆ ನಮ್ಮ ಕೈ ಬಿಟ್ಟಿಬಿಡ್ತು. ಈಗ ಆ ಬ್ರಾಹ್ಮಣನಿಗೆ ಪ್ರತಿನಿತ್ಯ ಮೂರೇ ಮೂರ್ಕಾಸು ಖರ್ಚು—ಬ್ರಾಹ್ಮಣರ ರೊಟ್ಟಿ, ಅಂಗಡಿಯ ಒಣಗಿದ ಬ್ರೆಡ್‌ನ ನಮ್ಮ ಜಾಕೀಗೆ ಲಂಚ ಕೊಡೋಕೆ ಪ್ರಾರಂಭಿಸಿಬಿಟ್ಟ, ಆ ಪ್ರಾಣಿ.

ಇಷ್ಟರವರೆವಿಗೂ ನಮ್ಮ ಅಣ್ಣನವರೆಗೂ ಹೋಗದ ಈ ಸುದ್ದಿ ಅವನಿಗೂ ಮುಟ್ಟಿತು. ಅವನೂ ಒಂದೊಂದು plan ಮುಂದಿಟ್ಕೊಂಡು ಕೆಲಸ ಮಾಡತೊಡಗಿದ. ಕಾಂಪೌಂಡಿನ ಗೇಟಿಗೆ ಬೀಗ ಹಾಕಿದ—ಆದರೇನು, ಆ ಪುಣ್ಯಾತ್ಮ ಮ್ಮೆ ಕೈ ತರಚಿಕೊಂಡಾದರೂ, ಕಾಂಪೌಂಡ್ ಧುಮುಕಿ, ತಸ್ಕರಕ್ಕೆ ತನ್ನ ತನುವನ್ನೇ ಧಾರೆಯೆರೆದ. ಗೋಡೆಯ ಮೇಲೆಲ್ಲಾ ಮುಳ್ಳನ್ನೆಬ್ಬಿಸಿ, ಗೋಡೆಯನ್ನು ಹತ್ತಲಾರದೆ ಹಿಂದಕ್ಕೆ ಹೋಗಿಯೇ ಹೋಗುತ್ತಾನೆ ಎಂದು ಪ್ರಯತ್ನ ಮಾಡಿದಿವಿ, ಆದರೇನು? ತನ್ನ walking stickನಿಂದ ಮುಳ್ಳನ್ನೆಲ್ಲಾ ಒತ್ತರಿಸಿ, ಚೆಪ್ಲಿ ಮೊದಲಾದ ಅಸ್ತ್ರಗಳನ್ನೂ ಧರಿಸಿಕೊಂಡು ತನ್ನ ದಿನಚರಿಯನ್ನು ತಪ್ಪಿಸಲೇ ಇಲ್ಲ, ಆ ಕಳ್ಳಾಗ್ರೇಸರ. ನಮ್ಮ ಅಣ್ಣನ ಮಕ್ಕಳಿಗೆಲ್ಲಾ ಒಂದು slogan ಹೇಳಿಕೊಟ್ಟು, ('ಲೋ, ಹೂವಿನಕಳ್ಳ' ಇದೇ ಆ slogan) ಆತ ಎಲ್ಲಿ ಹೋದರಲ್ಲಿ ಎಡೆಬಿಡದೆ ಕೂಗಿಸುತ್ತಿದ್ದೆ. ಒಂದೆರಡು ದಿನ ಅವನಿಗೂ ಕೇಳಿ ಕೇಳಿ ಬೇಜಾರಾಗಿ, ನಮ್ಮ ಮನೆಗೆ ನಮ್ಮ ಅಣ್ಣನನ್ನು ಹುಡುಕಿಕೊಂಡು ಬಂದ ಆತ. ನಮ್ಮ ಅಣ್ಣನೂ

ಮನೆಯಲ್ಲಿಯೇ ಇದ್ದ. ನಾನೂ ಎದುರಿಗೇ ಇದ್ದೆ; ಸಮಯ ಬಂದಾಗ ಮನಸ್ಸಿ ಅಂದು, ಆಡಿ ಈ ತಸ್ಕರೇಶನನ್ನು ದಾರಿಗೆ ತರಬೇಕೆಂದು. ಅಷ್ಟರಲ್ಲಿ ಅಜ್ಜಿ ನನ್ನ ಕೂಗಿ ಅಂಗಡಿಗೆ ಹೋಗಬೇಕೆಂದು ಸಾಮಾನುಗಳ ಪಟ್ಟಿಯನ್ನು ಕೊಟ್ಟರು. ಅದೇ ತಕ್ಕ ಸಮಯವೆಂದೋ ಏನೋ, ನಮ್ಮ ಅಣ್ಣನ ಮಕ್ಕಳಿಗೆಲ್ಲಾ ಎರಡೆರಡು ಕಿತ್ತಲೆ ಪೆಪ್ಪರ್‌ಮಿಂಟ್‌ಗಳನ್ನು ಹಂಚಿ, "ಜೀವಣ್ಣರಾವ್ (ನಮ್ಮ ಅಣ್ಣನ ಹೆಸರು) ಮನೇಲಿ ಲಕ್ಷಪೂಜೆ ಆರಂಭಿಸಿದ್ದಾಳೆ ನಮ್ಮಾಕೆ. ಸ್ವಲ್ಪ ಒಂದು ಹದಿನೈದು ದಿನ, ನಿಮ್ಮ ಮನೇಲಿರೋ ಹೂ ಪುಷ್ಪಗಳನ್ನು ತೆಗೆದುಕೊಳ್ಳಲು permission ಕೊಡಿ. ಬೆಳಗ್ಗೆ ಆಳನ್ನು ಕಳುಹಿಸ್ತೇನೆ. ಅಂಗಡೀಲಿ, ಆ ಹೂವು ಕೊಡೋನಿಗೆ ಎಷ್ಟು order ಮಾಡಿದ್ರೂ 'ಅವನ್ನೊತ್ತಿರೋದ್ಸಾಲದು'' ಎಂದು ಕೇಳಿಕೊಂಡರು ನಮ್ಮ ಅಣ್ಣನದು ಸ್ವಲ್ಪ ದಾಕ್ಷಿಣ್ಯ ಸ್ವಭಾವ. "ಹಾಗೇ ಆಗಲಿ" ಎಂದು ಆತನನ್ನು ಕಳುಹಿಸಿಕೊಟ್ಟು, ಮನೆಯಲ್ಲಿಯೂ ಎಲ್ಲರನ್ನೂ ಕಟ್ಟುಮಾಡಿ, ಲಾಯರ್ ಸುಬ್ಬ ರಾಯರ ದೇವತಾರ್ಚನೆಗೆ ನಮ್ಮ ಮನೆಯ ಗಿಡಗಳಲ್ಲಿ ಬೆಳೆಸಿದ ಸಮಸ್ತ ಪುಷ್ಪ ಗಳನ್ನೂ reserve ಮಾಡಿಸಿದ.

ಈಗಂತೂ ಆತ ಧೈರ್ಯವಾಗಿ, ಎಂದೂ ಹೊತ್ತು ಹುಟ್ಟುವುದರೊಳಗೇ ಬರುತ್ತಿದ್ದ ಆಸಾಮಿ, ಹೊತ್ತು ಮೀರಿ ಬಂದು ಎಲ್ಲರೆದುರಿನಲ್ಲೇ ನಮ್ಮ ನಂದನ ವನವನ್ನು ಬೋಳುಮಾಡಿ ಹೋಗಲಾರಂಭವಾಯಿತು.

ಮೊನ್ನೆ ಆತನ ಪತ್ನಿ ನಮ್ಮ ಮನೆಗೆ ಬಂದರು. ತಮ್ಮ ಪೂಜೆ ನಿತ್ಯವೂ ನಿರ್ವಿಘ್ನವಾಗಿ ನಡೆಯುತ್ತಿದ್ದುದರ ಫಲವಾಗಿ, ನಮ್ಮತ್ತಿಗೆಯವರಿಗೆ ಅಡಕೆಲೆ ಕೊಡುವುದಕ್ಕೆ ಮಾತಿಗೆ ಮಾತು ಬಂದು, "ಎಂತಹ ಕಾಲನಮ್ಮ, ಸೀತಮ್ಮ ಇದು! ಹಾಳು ತುಂಬೆ, ಬಿಂದಿಗೆ ಹೂವಿಗೂ ಎಷ್ಟು ಕೇಳ್ತಾರೇಂತ ಈ ಹೂವಾಡಿಗರು. ಲಕ್ಷ ಪೂಜೆ ಆರಂಭಿಸಿದ್ದಿರಲಿ, ನಾನು. ಈ ಹೂವಾಡಿಗರಿಗೆ ತೆತ್ತೂ ತೆತ್ತೂ ಸಾಕಾಗ್ಹೋಗಿದೆ ನಮ್ಮನೆಯೋರ್ಗೆ" ಎಂದು ಅಂದೇಬಿಟ್ಟರು. ನಮ್ಮ ಅತ್ತಿಗೆ ಪೆಚ್ಚು ಮೋರೆ ಹಾಕಿಕೊಂಡು, ಆಕೆಯನ್ನೇ ಮಿಕಮಿಕನೆ ನೋಡುತ್ತಿದ್ದರು.

ನಾನು ಇದನ್ನು ಕೇಳಿ ಹೇಳಿದೆ—"ಈ ಉದ್ಯಾನವನ ನಮಗೆ ಬೇಡ. ಇನ್ನು ಕಷ್ಟಪಡೋದ್ಬೇಡ. ಈ ಗಿಡಗಳಿಗೆ ನೀರು ನಿಡಿ ಎಲ್ಲಾ ಬಿಡೀ''ಂದೆ. ಹಾಗೆಯೇ ಏನೊಂದೂ ಪ್ರೋಕ್ಷಣೆಯಿಲ್ಲದೆ ಗಿಡಗಳೆಲ್ಲಾ ಒಣಗಿ, ಹೂ ಸಿಕ್ಕದೇ ಹೋಯಿತು ಆ ಲಾಯ್ರೀಗೆ.

ಆದರೇನು? ಎದುರು ಮನೆಯ ತೋಟದಲ್ಲಿ ಇತ್ತೀಚೆಗೆ ಪುಷ್ಪಕರಂಡಗಳೇ ಕಳ್ಳತನವಾಗುತ್ತಿವೆಯೆಂದು ಸುದ್ದಿ........ಇಂತಹವರೂ ಇದ್ದಾರೆಯೇ? ಈ ಪ್ರಶ್ನೆ ನೀವೇನೂ ಹಾಕಬೇಕಾದ್ದಿಲ್ಲ. ಇಂತಹವರೆಷ್ಟೋ ಮಂದಿ ಇದ್ದಾರೆ.

—[ ಕಾಲ್ಪನಿಕ ]—

—"ಪಂಡಿತ್"

———o———

# ಸಮಾಜದಲ್ಲೊಂದು ಸಭೆ

---

ಉಪನ್ಯಾಸಿಕೆ—(ಥಟಕ್ಕನೆ ಒಳಗೆ ನುಗ್ಗಿ ಗಾಬರಿಗೊಂಡ ವದನದಿಂದ) ನಾನು ಬರುವುದು ತಡವಾಯಿತು, ಕ್ಷಮಿಸಿ. ನೀವೇಯೋ ಮರಕತಮ್ಮನವರು?

ನಾಮಗಿರಿ—ತಡವೇನೂ ಇಲ್ಲ, ಬನ್ನಿ......ಇನ್ನೂ ಯಾರೂ ಬಂದಿಲ್ಲ........ಆರಾಮವಾಗಿ ಕೂತುಕೊಳ್ಳಿ........ನನ್ನ ಹೆಸರು ನಾಮಗಿರಿ. ಮರಕತಮ್ಮನವರು ಇಷ್ಟರಲ್ಲೇ ಬಂದುಬಿಡುತ್ತಾರೆ.

ಉ—ಇದೇ ತಾನೆ ವನಿತಾ ಸಮಾಜ? ಮೀಟಿಂಗ್ ಇಲ್ಲೇ ತಾನೆ?

ನಾ—ಅಯ್ಯೋ! ಈ ಊರಲ್ಲಿ ಇದಲ್ಲದೆ ಇನ್ನೊಂದು ಸಮಾಜ ಬೇರೆ ಇರುವುದಕ್ಕೆ ಸಾಧ್ಯವೆ? ಇದರ ಗತಿಯೇ ಹೀಗಿರುವಾಗ?......ಇಲ್ಲೇ ಇವತ್ತಿನ ಮೀಟಿಂಗು ........ಅದಕ್ಕೇ ಒಬ್ಬರೂ ತಲೆಹಾಕಿಲ್ಲ!

ಉ—ತಲೆಹಾಕದೆ ಇದ್ದರೆ ಹೇಗೆ? ಮರಕತಂ ಆದರೂ ಬರಬೇಡವೆ? ನಾನೇ ಉಪನ್ಯಾಸ ಕೊಡುವವಳು! ಇವತ್ತು.

ನಾ—ಅಯ್ಯೋ! ನೀವೇ? ಕೂತುಕೊಳ್ಳಿ! ಕೂತುಕೊಳ್ಳಿ...........ಇನ್ನೊಂದು ಕುರ್ಚಿ ಎಳೆದುಕೊಳ್ಳಿ. ಬರುವವರೆಲ್ಲ ಬಂದುಬಿಡುತ್ತಾರೆ, ಇನ್ನೊಂದೆರಡು ಗಂಟೆಯೊಳಗೆ........ಆಕೋ! ಸುಬ್ಬಣ್ಣಮ್ಮನವರು ಬಂದರು........ಇವತ್ತು ನಮ್ಮ ಪುಣ್ಯಕ್ಕೆ ಅವರು ಬೇಗನೆ ಬಂದುಬಿಟ್ಟಿದ್ದಾರೆ!........ಸುಬ್ಬಣ್ಣಮ್ಮನವರೇ! ಇವರೇ ಅಂತೆ ಲೆಕ್ಚರ್ ಮಾಡುವವರು!

ಸು—ಏನು? ಇವರೇ?

ನಾ—ಹೌದು! ಇವರೇ! ಕೇಳಿ ಅವರನ್ನೇ!

ಉ—ಲೆಕ್ಚರ್ ಕೊಡುವವಳು ನಾನೆ! ಆದರೆ, ಕೇಳುವವರು ಯಾರೋ ಗೊತ್ತಾಗಲಿಲ್ಲ.

ಸು—ನೀವೇನೂ ಕೊರಗಬೇಡಿ........ಮರಕತಮ್ಮನವರು ಮೂಗುತಿಗೆ ದಾರ ಕಟ್ಟಿ ಹಿಡಿದು ತರುತ್ತಾರೆ ಜನಗಳನ್ನ..........ನಮ್ಮ ಸಮಾಜದಲ್ಲಿ ಈಚೀಚೆಗೆ ಮೆಂಬರುಗಳೇ ಕಡಿಮೆ.........ಇರುವ ನಾಲ್ಕು ಜನ ಕೂಡ ಅರಕ್ಕೋ ಮೂರಕ್ಕೋ ಇಣಿಕಿ ನೋಡುತ್ತಾರೆ. ಅದರಲ್ಲೂ, 'ಲೆಕ್ಚರು' ಅಂದರೆ,

ಹೆದರಿ ಸಾಯುತ್ತಾರೆ! ಇವರಿಗೆ ಅಂತ ಹರಿಕಥೆ, ಸಂಗೀತ ಅಂತ ಒಳ್ಳೊಳ್ಳೆ ಪ್ರೋಗ್ರಾಮುನ್ನೇ ಸದಾ ಏರ್ಪಾಟು ಮಾಡುವುದಕ್ಕಾಗುತ್ತದೆಯೇ, ನೀವೇ ಹೇಳಿ........

ನಾ—ತಮ್ಮಂತಹವರು ಇಲ್ಲಿಗೆ ಬರುವುದೇ ಅಪರೂಪವಾಗಿರುವಾಗ........

ಉ—ಇಲ್ಲಿನ ವಿಷಯ ಹೀಗೆ ಅಂತ ತಿಳಿದಿದ್ದರೆ ನಾನೂ ಬರುತ್ತಿರಲಿಲ್ಲ........

ಸು—ಹಾಗೆನ್ನಬೇಡಿ!........ಜನ ಸೇರುತ್ತಾರೆ. ಬೇಜಾರು ಪಟ್ಟುಕೊಳ್ಳಬೇಡಿ. ಇವತ್ತು ಶುಕ್ರವಾರ........ಹೆಂಗಸರೆಲ್ಲ ಅರಶಿನ ಕುಂಕುಮ ಅಂತ ತಿರುಗುತ್ತಿರುತ್ತಾರೆ........ನಮ್ಮೂರು ಇನ್ನೂ ಹಳ್ಳಿ! ಕೊಂಚ ತಡವಾಗಬಹುದೇ ಹೊರತು ತಮ್ಮ ಲೆಕ್ಚರಿಗೆ ಜನ ಏನೋ ಸಿಗುತ್ತಾರೆ.

ನಾ—ಮದುವೆ ಗಲಾಟೆಗಳು ಬೇರೆ........ಏನಿಲ್ಲ ಅಂದರೂ ಈಗ ಈ ಊರಲ್ಲಿ ಹನ್ನೆರಡು ಚಪ್ಪರ ಇದೆ.

ಸು—ಒಂದು ತೆಂಗಿನ ಕಾಯಿಗೆ ಎರಡೂವರೆ ಆಣೆ!

ನಾ—ಅಕೋ! ಬಂದರಲ್ಲ!

ಉ—ಯಾರು ಅವರು?

ನಾ—ಅವರೇ ಪಾತಜ್ಜಿ.

ಸು—ಪಾತಜ್ಜಿ ವಿಷಯ ತಿಳಿಯದೇ ನಿಮಗೆ? ಪಾಪ........ಪಾತಜ್ಜಿಗೆ ಎಪ್ಪತ್ತೈದು ವರ್ಷ. ಅರಳು ಮರಳು........ಆದರೂ, ನಮ್ಮ ಸಮಾಜದಲ್ಲಿ ಏನೇ ನಡೆಯಲಿ........ಕಡೇ ಪಕ್ಷ ಒಂದು ಲೆಕ್ಚರೇ ಆಗಲಿ........ಬಂದುಬಿಡುತ್ತಾರೆ.

ನಾ—ಕಿವಿ ಬೇರೆ ಕೇಳಿಸದು ಅವರಿಗೆ.

ಸು—ಹುಂ........ಕಣ್ಣಾರೆ ಕಂಡರೆ ಸಾಕು, ಅಂತಾರೆ.

ನಾ—ಕಣ್ಣು ಕೂಡ ಕೊಂಚ ಮಂದವೇ!

ಸು—ಅಂತು, ಸಭೆ ತುಂಬುತ್ತೆ ಅಂತ ಹೇಳಿ, ನಾಮಗಿರಮ್ಮನವರೇ! ಆ ಮೂಲೆ ಅವರದೇ, ಈ ಸಮಾಜ ಪ್ರಾರಂಭವಾದಂದಿನಿಂದ.

ಉ—ಜೊತೆಗೆ ಬರುತ್ತಿರುವವಳು ಯಾರು?

ಸು—ಆದೊಂದನುಕೂಲ, ಪಾತಜ್ಜಿ ಬಂದರೆ, ಮೊಮ್ಮಗಳೂ ಬರುತ್ತಾಳೆ ಜೊತೆಗೆ ........ಅವಳೂ ಅಷ್ಟೆ! ಕೊನೆತನಕ ಕಾದುಕೂತಿರುತ್ತಾಳೆ.

ನಾ—ಅಕೊ! ಶಿಶುವಿಹಾರದ ಹುಡುಗಿಯರು ಬಂದರು! ಇನ್ನು ಪರವಾಗಿಲ್ಲ...... ನಿಮ್ಮ ಲೆಕ್ಚರು ನೆರವೇರಿದ ಹಾಗೇನೆ!

ಉ—ಯಾಕೆ?

ನಾ—ನಮ್ಮಲ್ಲಿ ಜನ ಬರುವುದು ಕಡಿಮೆ ಅಂತ ಹೆದರಿಕೆ ಬಂದ ದಿನ, ಮರಕತಮ್ಮನವರು ಆ ಮೇಡಂಗೆ ಹೇಳಿಕಳುಹಿಸುತ್ತಾರೆ.......ಅವರು ಈ ಚಿಳ್ಳೆ ಪಿಳ್ಳೆಗಳನ್ನೆಲ್ಲ ಕಳುಹಿಸುತ್ತಾರೆ.

ಸು—ಅದಕ್ಕೇನಾದರೂ ನಾಲ್ಕಾಣೆ, ಎಂಟಾಣೆ ಕೊಡುತ್ತಾರೆ, ಮರಕತಮ್ಮನವರು.

ನಾ—ನೀವೇನೂ ಹೆದರಬೇಡಿ! ಹುಡುಗಿಯರು ತೆಪ್ಪಗೆ ಕೂತಿರುತ್ತವೆ.

ಸು—ಅಕೊ! ಮರಕತಮ್ಮನವರೂ ಬಂದರು! ಅವರ ಚಿಕ್ಕಮ್ಮನ ಮಕ್ಕಳೂ ಬರುತ್ತಿವೆ. ಅವು ಪಾಪ, ಮರಕತಮ್ಮನವರು ಎಳೆದ ಕಡೆ ಬಾಯಿ ಮುಚ್ಚಿಕೊಂಡು ಬರುತ್ತವೆ.........

ನಾ—ಮರಕತಮ್ಮನವರು ವಂದನಾರ್ಪಣ ಮಾಡುವಾಗ ಚಪ್ಪಾಳೆ ತಟ್ಟುವುದಕ್ಕಾಗಿಯೇ ಅವರು ಬಂದಿರುವುದು. ಚೆನ್ನಾಗಿ ತಟ್ಟುತ್ತಾರೆ.

ಸು—ಎಂತಹ ಲೆಕ್ಚರಾದರೂ, ತೆಪ್ಪಗೆ ಕೂತಿರುತ್ತವೆ.

ನಾ—ಮಕ್ಕಳು ಗಲಾಟೆ ಮಾಡದೆ ಇರುವುದಕ್ಕೆ ಆ ಮೇಡಂ ಗಂಡಾನೂ ಬಂದುಬಿಡುತ್ತಾರೆ, ಇಷ್ಟರಲ್ಲೇ!

ಉ—ಮರಕತಮ್ಮನವರೇ! ಬನ್ನಿ!

ಮರಕತಮ್ಮನವರು—ಅಯ್ಯೋ! ಆಗಲೇ ಬಂದುಬಿಟ್ಟಿರಾ? ಏನು ಮಾಡೋದು ರಂಗನಾಯಕಮ್ಮನವರೇ! ಇಷ್ಟು ಜನ ಸೇರಿಸುವುದಕ್ಕೆ ಇಷ್ಟು ತಡವಾಯಿತು ನೋಡಿ.

ಉ—ನಿಮ್ಮ ಚಿಕ್ಕಮ್ಮನವರ ಮಕ್ಕಳಿಬ್ಬರೂ ಉಪನ್ಯಾಸಕ್ಕೂ ಚಪ್ಪಾಳೆ ತಟ್ಟುತ್ತಾರೆ ತಾನೆ?

ಮ—ತಟ್ಟಿ ಅಂತ ಹೇಳಿದೇನೆ. ಕೇಳುತ್ತ ಸುಮ್ಮನೆ ತೂಕಡಿಸಬೇಡಿ ಅಂತ ಹೇಳಿದೇನೆ!

ಉ—ಹಾಗಾದರೆ, ಪ್ರಾರಂಭ ಮಾಡೋಣವೆ?

ಮ—ಹುಂ. ತಟ್ಟಿರಮ್ಮ........

—ಶ್ರೀಮತಿ ಕೇಸರಿ.

—o—



ಅಷ್ಟೇನೆ—“ಕಾಲ್ಮೇಲೆ ನಿಂತಿದ್ದಿ. ಜ್ಞಾನ ಇಲ್ವೆ” ಅಂದ ಹಾಗಾಯಿತು —ಅದಕ್ಕೇ ಕೇಳಿದೆ.

# ಪ್ರೇಮ ಕುವರಿ

ಪ್ರೇಮ ಕುವರಿ, ಪ್ರೇಮ ಕುವರಿ, ಎಂದೊಬ್ಬ ಹುಡುಗಿಯು ಒಂದೂರಿನಲ್ಲಿದ್ದಳು. ಅವಳು ಬಿ. ಎ. ಪ್ಯಾಸು ಮಾಡಿದ್ದಳು. ತುಟಿಗೆ ರಂಗಿಡುವುದನ್ನು ಕಲಿತಿದ್ದಳು. ಹಾಗೂ ಎರಡು ಜಡೆ ಮಧ್ಯಕ್ಕೂ ಮಲ್ಲಿಗೆ ದಂಡೆ ಇಡುವುದನ್ನು ತಿಳಿದಿದ್ದಳು.

ಇವಳ ತಂದೆ ಪ್ರಸಿದ್ಧ ನಾಡೀ ಶಾಸ್ತ್ರ ವಿಶಾರದ, ಲಕ್ಷಾಧೀಶ್ವರ. ಇವಳ ತಾಯಿಯೂ ಅಷ್ಟೆ—ಲಕ್ಷಾಧೀಶ್ವರನೀಶ್ವರಿ. ಅವಳಿಗೆ ಲಕ್ಷವಿಲ್ಲದ್ದು ಒಂದೇ—ಗಂಡ.

ಒಂದಾನೊಂದು ದಿನ ಹೆಂಡತಿ ಗಂಡಂದಿರು ಮಾತನಾಡಿಕೊಂಡರು. ಮಗಳಿಗೆ ವಯಸ್ಸಾಗುತ್ತ ಬಂದು, ಹೊರಗೆಲ್ಲಾ ಹೋಗಿ ಸುತ್ತಿಕೊಂಡು ಬರುತ್ತಾಳೆ, ಚಲನ ಚಿತ್ರಗಳಿಗೆ ಹೋಗುತ್ತಾಳೆ, ಆದಷ್ಟು ಬೇಗ ಮದುವೆ ಮಾಡಿದರೆ ಒಳ್ಳೆಯದು. ಅಪ್ರತಿಮ, ಅಲಂಕಾರ, ಅಜೇಯ, ಅಕಾರಾದಿಯಾದ ವರನನ್ನು ಹುಡುಕಿ ಬೇಗ ಮದುವೆ ಮಾಡಿದರೆ ಒಳ್ಳೆಯದು. ಹೇಗೂ ಬೆಳೆದ ಹುಡುಗಿ ಅವಳನ್ನೂ ಒಂದು ಮಾತು ಕೇಳಿದರೆ ಒಳ್ಳೆಯದು ಎಂದು, ಮಹಡಿಯ ಮೇಲಿದ್ದ ಪ್ರೇಮ ಕುವರಿಯನ್ನು ಇಳಿದು ಬಾ ತಾಯಿ, ಇಳಿದು ಬಾ ಎಂದು ಕೂಗಿದರು. ಉತ್ತರವಿಲ್ಲ. ಸರಿದು ಬಾ ತಾಯಿ, ಸರಿದು ಬಾ ಎಂದು ಕೂಗಿದರು. ನಿರುತ್ತರ. ಸರಿಗೆಯದು ಬಂದಿಹುದು ಬೇಗ ಬಾ ಎಂದು ಕೂಗಿದರು. ಆಗ ಮಹಡಿಯಿಂದ ವಾಲಾಡುತ್ತ ಕೆಳಗಿಳಿದು ಬಂದು ಎದುರು ನಿಂತಳು ಕುವರಿ.

ನಿನಗೆ ಮದುವೆ ಮಾಡಬೇಕೆಂದಿದ್ದೇವೆ. ಅನುರೂಪನಾದ ವರನನ್ನು ಹುಡುಕುತ್ತಿದ್ದೇವೆ. ನಿನ್ನ ಇಷ್ಟವೇನು ಅದನ್ನು ಕೇಳಲು ನಿನ್ನನ್ನು ಕರೆದಿದ್ದು ಎಂದು ತಂದೆಯು ಹೇಳಿದನು.

"ನನ್ನ ಇಷ್ಟವೇನೂ ಇಲ್ಲ. ಯಾರಾದರೇನು ಅಮ್ಮನು ಅಂದಂತೆ ಒಬ್ಬ ಮನುಷ್ಯನಂತೆ ಇನ್ನೊಬ್ಬ. ಇದರಲ್ಲಿ ಇಷ್ಟ ಏನು"

ತಂದೆಯು ತಾಯಿಯನ್ನು ಸ್ವಲ್ಪ ಕ್ರೂರವಾಗಿ ಆಕೆಯು ನೋಡದೆ ಇದ್ದಾಗ ನೋಡಿದ.

"ಯಾರಾದರೂ ಆಯಿತು ಎಂದು ಹೇಳಿದಂತಾಯಿತು ನೀನು. ಆದರೆ, ನನ್ನ ಯೋಗ್ಯತೆಗೆ ತಕ್ಕ ಅಳಿಯನನ್ನು ನಾನು ಹುಡುಕಬೇಕು. ಹಿಂದೆ ಯಾರೂ ಮಾಡದ ಸಾಹಸದ ಕೆಲಸವನ್ನು ಯಾರು ಮಾಡುತ್ತಾರೋ ಅವರನ್ನು ಅಳಿಯನನ್ನು ಮಾಡಿಕೊಳ್ಳಬೇಕು" ಎಂದು ಹೇಳಿ, ಅದೇ ರೀತಿ ಊರಿಗೆಲ್ಲಾ ತಿಳಿಸಿದ.

ಈ ಸುದ್ದಿಯು ಹೊರಬಿದ್ದ ಮೂರನೆಯ ದಿನ ಮಾವಿನ ತೋಪಿನ ಬಳಿ ಇದ್ದ ಮೀನಾಕ್ಷಯ್ಯನು ಬಂದು "ರಾಯರೇ ನಾನು ನೂರಡಿ ಎತ್ತರದಿಂದ ಮೂರಡಿ ನೀರಿಗೆ ಧುಮುಕಿ ಈಜಲೆತ್ನಿಸಿದೆ. ಅದರಿಂದಲೇ ತಲೆಯ ಮುಂಭಾಗವು ಹೀಗೆ ಉಬ್ಬಿರುವುದು. ಈ ಸಾಹಸ ಕಾರ್ಯವನ್ನು ಹಿಂದೆ ಯಾರೂ ಮಾಡಿಲ್ಲ. ನಿಮ್ಮ ಮಗಳನ್ನು ನಾನು ನೋಡಿಲ್ಲ. ಅವಳಿಗೆ ಬಿ. ಎ. ಆದರೂ ಪರವಾಗಿಲ್ಲ. ನಿಮ್ಮ ಮಾವಿನ ತೋಪನ್ನು ನೋಡಿದ್ದೇನೆ. ಆ ಹಣ್ಣುಗಳು ಬಲು ಚೆಂದ. ಅದಕ್ಕಾಗಿ ನಿಮ್ಮ ಕುಮಾರ್ತಿಯ ಕೈಹಿಡಿಯಲು ಸಿದ್ಧ" ಎಂದು ಹೇಳಿದ.

"ನೂರಡಿ ಎತ್ತರ ಸಾಲದು. ನೂರೈವತ್ತಡಿಯಿಂದ ಹಾರಿದವರಿದ್ದಾರೆ. ಇನ್ನೂರು ಅಡಿ ಎತ್ತರದಿಂದ ಹಾರಿದರೆ ಆಗ ನೋಡೋಣ"

"ಸರಿ, ಇನ್ನೂರಡಿ ಎತ್ತರದಿಂದ ಈಜಲು ಧುಮುಕಿದವನ ದೇಹವನ್ನು ಇನ್ನೂ ಪೋಲೀಸರು ಪತ್ತೆ ಮಾಡುತ್ತಿದ್ದಾರೆ ಅನ್ನಿ"

ಈ ಮಧ್ಯೆ ಇನ್ನೊಬ್ಬಾತ ಬಂದ. "ನಾನೊಬ್ಬ ಗ್ರಂಥಕಾರ. ಹಲವಾರು ಪುಸ್ತಕಗಳನ್ನು ಬರೆದಿದ್ದೇನೆ. ವಿಮರ್ಶಕನಾರೂ ಅವುಗಳಲ್ಲಿ ಒಂದಾದರೂ ಚೆನ್ನು ಒಂದಾದರೂ ಬುದ್ಧಿ ಉಪಯೋಗಿಸಿ ಬರೆದುದು ಎಂದು ಹೇಳಲಿಲ್ಲ"ಎಂದ. "ಯಾವು ದಾದರೂ ಪುಸ್ತಕವು ಶಾಲೆಗಳಿಗೆ ಪಠ್ಯ ಪುಸ್ತಕವಾಗಿತ್ತೆ?" ಎಂದು ತಂದೆಯು ಕೇಳಿದ "ಹೌದು" ಎಂದು ಗ್ರಂಥಕರ್ತನಂದ. "ಹೋಗಿಬಾರಯ್ಯ" ಎಂದ ತಂದೆ. ಗ್ರಂಥಕರ್ತನು ನಿರಾಶನಾಗಿ ಮನೆಗೆ ಹೋಗಿ ಮಂಡೆ ಚಚ್ಚಿಕೊಂಡು ತಲೆಯಿಲ್ಲದವ ನಾದ. ಅಂದಿನಿಂದಾಚೆಗೆ ಆತ ಬರೆದಿದ್ದೆಲ್ಲಾ ಮಾರಾಟವಾಗಲಾರಂಭಿಸಿತು.

ಪ್ರೇಮ ಕುವರಿಯು ಆಗ ತಂದೆಗೆ ಹೇಳಿದಳು. "ಅಪ್ಪಾ ನಾನು ಹೀಗೇ ಓದಿಕೊಂಡು ಸುಖವಾಗಿರುತ್ತೇನೆ. ನಿನ್ನ ಹಣ ನೋಡಿ ನನ್ನ ಕೈ ಹಿಡಿಯಲು ಬರುವವರೆಲ್ಲಾ ಹೀಗೆ ಹಾಳಾಗಿ ಹೋಗುತ್ತಿದ್ದಾರೆ." "ಹಾಗುಂಟೆ ಮಗಳೆ. ನನ್ನ ಶಾಸ್ತ್ರದ ರೀತಿಯಾಗಿ ಸಾಹಸವಂತನು ಅಳಿಯನಾಗಲೇ ಬೇಕು. ನನ್ನ ಕೈಲಾ ದ್ದನ್ನು ಮಾಡಿಯೇ ಬಿಡುತ್ತೇನೆ. ಒಂದು ವೇಳೆ ನನಗೆ ಬೇಡ ಎಂದರೂ ನಿನ್ನ ತಾಯಿಯು ಸುಮ್ಮನಿರುವುದಿಲ್ಲ ಅಂದ ಮೇಲೆ ಅಲ್ಪಾರ್ಥನಾದ ನಾನೂ ಸುಮ್ಮ ನಿರಲಾಗುವುದಿಲ್ಲ" ಎಂದಂದು, ಇನ್ನೂ ಆತುರದಿಂದ ವರಾನ್ವೇಷಣಕ್ಕೆ ಶುರು ಮಾಡಿದನು.

ಮಗದೊಬ್ಬ ಭಾವೀ ಅಳಿಯನು ಬಂದನು. ಆತನೂ ಭಾವೀ ಮಾವನ ತೋಟಗದ್ದೆಗಳನ್ನು ನೋಡಿದ್ದನು. ಅತ್ತೆಯನ್ನು ಒಮ್ಮೆ ಕಂಡಿದ್ದನಾದರೂ ಭಯಪಡದೆ, ಪಾಣಿಗ್ರಹಣಕ್ಕೆ ಒಪ್ಪಿ ಬಂದನು. ನಾನೊಬ್ಬ ಪ್ರವಾಸಿ, ಬರ್ಮಾ ದೇಶದ ಗಡಿನಾಡನ್ನೆಲ್ಲಾ ಸುತ್ತಿಬಂದಿದ್ದೇನೆ. ಇಲ್ಲಿನ ತನಕ ಯಾವ ಭಾರತೀ ಯನು ಅಲ್ಲೆಲ್ಲಾ ಸುತ್ತಿಲ್ಲ. ಅಲ್ಲಿರುವ ನಾಗ ಪ್ರಜೆಗಳನ್ನು ನೋಡಿ ಬಂದಿದ್ದೇನೆ. ಅವರೊಡನೆ ಊಟಮಾಡಿದ್ದೇನೆ ಅವರಲ್ಲೂ ನಾಗರಿಕತೆಯುಹಬ್ಬಿದ್ದನ್ನು ಕಂಡಿ

ದ್ದೇನೆ. ಅಲ್ಲಿ ಕೂಡ ವರಮಾನ ತೆರಿಗೆಗಳು ಬಂದಿದ್ದನ್ನೂ ನೋಡಿದ್ದೇನೆ. ನರಭಕ್ಷಕರ ಕೈ ತಪ್ಪಿಸಿಕೊಂಡು ಬಂದಿದ್ದೇನೆ'' ಇಂತೆಲ್ಲಾ ಹೇಳಿದ. "ನರಭಕ್ಷಕರೊಡನೆ ಊಟಮಾಡಿದೆಯಾ'' ಎಂದು ತಂದೆ ಕೇಳಿದಾಗ ಇಲ್ಲ ಎಂದು ಹೇಳಲೇಬೇಕಾಯಿತು. ಆಗ ಆತನು ತಿರುಗಿ ''ನಾಗಲೋಕಕ್ಕೆ ಹೋಗಿ ನರಭಕ್ಷಕರೊಡನೆ ಊಟಮಾಡಿ ಬರುತ್ತೇನೆ, ಆಮೇಲಾದರೂ ನಿಮ್ಮ ಅಳಿಯ ಆಗಲು ಅಭ್ಯಂತರವಿಲ್ಲವಷ್ಟೆ' ಎಂದು ಪೂರ್ವ ಗಡಿನಾಡಿಗೆ ಒಂದೇ ಉಸುರಿಗೆ ಹೊರಟನು. ಮೂರನೆಯ ತಿಂಗಳೇ ಕಾಗದ ಒಂದು ಬಂದಿತು. ನರಭಕ್ಷಕರನ್ನು ಸಂಧಿಸಿದೆ. ಅವರ ಪಾಳೆಯಗಾರನ ಪರಿಚಯವಾಯ್ತು'' ಎಂದು. ಮೂರನೆಯ ವಾರವೇ ಪಾಳೆಯಗಾರನಿಂದ ಕಾಗದವೂ ಬಂತು. ''ನಿಮ್ಮ ಪರಿಚಿತನು ಬಲು ರುಚಿಯಾಗಿದ್ದನು. ಹೀಗೇ ನಿಮ್ಮ ಪರಿಚಿತರನ್ನು, ಪುಷ್ಪಕಾಯರನ್ನು ಕಳಿಸಿ'' ಎಂದು.

ನಾಡೀ ಶಾಸ್ತ್ರಕಾರನು ನಿರಾಶನಾದನು. ಲಕ್ಷಾಧೀಶ್ವರೀಶ್ವರಿಯು ನಿಟ್ಟುಸಿರು ಬಿಟ್ಟಳು.

ಪ್ರೇಮ ಕುವರಿಯು ಆ ಸಾಯಂಕಾಲ ಸಮಾಜಕ್ಕೆ ಹೋಗುತ್ತಿದ್ದಳು. ಹಾದಿಯಲ್ಲಿ ಪಾರ್ಕಿನಲ್ಲಿ ತುಂಟನೊಬ್ಬನು ಹುಡುಗರೊಂದಿಗೆ ಪಟ ಆಡಿಸುತ್ತಿದ್ದನು. ಹರಿಣಾಕ್ಷಿಯು ಜಿಂಕೆಯಂತೆ ಚಿಗಿದು ನಡೆಯುವುದನ್ನು ಕಂಡು ಪಟದ ದಾರವನ್ನು ಹಾಗೆಯೇ ಕೈ ಬಿಟ್ಟನು. "ಹಾರುವ ಪಟ ಏನು ಚೆನ್ನ. ನಡೆಯುವ ಪಟದ ಮುಂದೆ" ಎಂದನು. "ಎಲ್ಲಿಗೆ ಹೋಗುತ್ತಿರುವೆ" ಎಂದು ಕೇಳಿದನು. ''ಹೋಗುತ್ತಿಲ್ಲ. ಬರುತ್ತಿದೇನೆ ಸಮಾಜಕ್ಕೆ'' ಎಂದಳು ಪ್ರೇಮ ಕುವರಿ. "ಈ ಹಳೇ ಕುಹಕಿಡಿಯನ್ನು ಹೇಳಲು ಇದು ಸಮಯವೇ" ಎಂದನು. ''ಹೋಗೋ ಹೋಗೋ ಮಲ್ಲ. ಈ ಮಾತೆಲ್ಲ ಏಕೆ'' ಎಂದಳು. ಪರಸ್ಪರ ವಾಗ್ಯುದ್ಧವು ಆರಂಭವಾಯಿತು. ಕಡೆಗೆ ಇಬ್ಬರೂ ಒಂದು ಕಲ್ಲಿನ ಮಂಚದ ಮೇಲೆ ಕುಳಿತು ಆತನ ಹತ್ತಿರ ಇದ್ದ ಕಡಲೇಕಾಯಿಯನ್ನು ತಿಂದರು. "ನಾಳೆ ಇಷ್ಟು ಹೊತ್ತಿಗೆ ಸಮಾಜದ ನೆಪಮಾಡಿಕೊಂಡು ಇಲ್ಲಿಗೆ ಬರುತ್ತೇನೆ"ಂದಳು. "ನಾನೂ ಪಟಹಾರಿಸುತ್ತಾ ಇರುತ್ತೇನೆ, ನೀನು ಬರುವ ತನಕ" ಎಂದನು. ಅಂತೇ ಆಯಿತು. ಮರುದಿನವೂ ಹಾಗೇ ಆಯಿತು. ಹೀಗೆ ಒಂದೆರಡು ತಿಂಗಳಾದ ಮೇಲೆ ಕುವರಿಯು ಎಂದಳು, ''ನಮ್ಮ ತಂದೆಯನ್ನು ನೋಡಿ ಮದುವೆ ಮಾಡಿಕೊಂಡರೇ ಚೆನ್ನಲ್ಲವೇ" ಎಂದು. "ಅದಕ್ಕೇನು ನಾಳೆಯೇ ನೋಡುತ್ತೇನೆ. ನನಗೇನು ಹೆದರಿಕೆ" ಎಂದನು.

ಮೂರನೆಯ ವಾರ ನಾಡೀ ಶಾಸ್ತ್ರಕಾರರನ್ನು ರಾಹುಕಾಲದಲ್ಲೇ ಕಂಡನು. "ನಿಮ್ಮ ಚರಸ್ಥಿರ ಸ್ವತ್ತುಗಳಿಗೆಲ್ಲಾ ಮಾಲೀಕನಾಗಲು ಬಂದಿದ್ದೇನೆ" ಎಂದನು. ''ನನ್ನ ಏಕಮಾತ್ರಪುತ್ರಿಯನ್ನು ಮದುವೆಯಾಗಬೇಕಾದರೆ ಸಾಹಸ ಕಾರ್ಯವನ್ನು —ಯಾರೂ ಮಾಡದ ಸಾಹಸದ ಕಾರ್ಯವನ್ನು ಮಾಡಿರಬೇಕು. ನೀನು ಯಾರು. ಎಲ್ಲಿಂದ ಬಂದೆ. ಯಾಕೆ ಇರುವೆ, ಏನೂ ಗೊತ್ತಿಲ್ಲ. ನೀನು ಹೇಗೆ ನನ್ನ ಉತ್ತರಾಧಿಕಾರಿಯಾಗುವೆ'' ಎಂದನು.

"ಮೊನ್ನೆ ಆರ್ಯ ಸಮಾಜದಲ್ಲಿ ಪ್ರೇಮ ಕುಮರಿಯನ್ನು ಮದುವೆ ಮಾಡಿಕೊಂಡೆ. ಯಾರೂ ಈ ಸಾಹಸದ ಕಾರ್ಯವನ್ನು ಮಾಡುತ್ತಿಲ್ಲ. ಈಗೇನೆನ್ನುವಿ" ಎಂದನಾ ಅಳಿಯ.

ಪತ್ರ ಕಾಗದಗಳೆಲ್ಲಾ ಮಾರನೆಯ ಮಧ್ಯಾಹ್ನ ಮುಗಿದುವು. ಆಗ ಅತ್ತೆಯ ಜೋರೂ ಸ್ವಲ್ಪ ನೀರಾಯಿತು. ಅವರ ಮನೆಯಲ್ಲಿ ಅವರೇ ಊಳಿಗದವರಂತಾದರು. ಆಗಂದಳು ಅತ್ತೆಮ್ಮನವರು, "ಅಲ್ಲಾ ಅಂದ್ರೆ ನೀವೂ ಅಳಿಯಂದಿರ ಹಾಗೆ ಜೋರಾಗಿದ್ದರೆ, ಈ ಮುಪ್ಪಿನಲ್ಲಿ ಈ ಪಾಡು ಪಡಬೇಕಾಗಿರಲಿಲ್ಲವಲ್ಲ" ಎಂದು.

—— o ——



"ನಿಜ, ನೀನೋ ಇದನ್ನ ಯುಗಾದಿಗೆ ಹೊಲಸ್ಕೊಂಡಿರಬಹುದು.........ಆದ್ರೆ, ಅದನ್ನ ನೀನು ಈ ಮನೇಲಿ ಕೆಲಸಕ್ಕಿರೋತನ್ಕ ಹಾಕ್ಕೋ ಕೂಡ್ದು. ಯಾಕೆ ಹಾಗ್ಹೇಳ್ತಿನಂತ ನಾನು ಹೇಳ್ಬೇಕಾಗೇ ಇಲ್ಲ......."

# ಹೀಗೂ ಉಂಟೇ !

ಅಯ್ಯೋ, ಈ ವಿಮಾದೂತರ ಕಾಟ ಎಮ್ಮೆರಿಗೂ ಬೇಡರಿ. ಕಾಲ, ಸ್ಥಳ ಇವುಗಳ ಔಚಿತ್ಯ ತಿಳೀದೇ. ಹೋಟೆಲಲ್ಲಿ, ಸಿನಿಮಾ ಮಂದಿರದಲ್ಲಿ, ಪಾರ್ಕಿನಲ್ಲಿ ಎಲ್ಲೆಲ್ಲೂ ಸುಳೀತಾ "ಏನ್ಸಾರ್, ಒಂದು ನಿಮಿಷ, ನೀವು ಜೀವವಿಮೆ ಮಾಡೋ ದಿಲ್ವೇ? ಬಹಳ ಅನುಕೂಲವಾದ ಹೊಸ ಪಾಲಿಸಿಗಳು ಬಂದಿವೆ ಸಾರ್" ಅಂತ ಆರಂಭಿಸಿ, ಜೀವ ವಿಮೆಯಿಂದ ಆಗುವ ಸೌಕರ್ಯಗಳು, ಅದಿಲ್ಲದೆ ನಡೆಯುವ ಅನರ್ಥಗಳು ಎಲ್ಲಾ ವಿಷದವಾಗಿ ಉಪ್ಪುಕಾರ ಹಾಕಿ, ಕಥೆ ಕಟ್ಟಿ ಕಿವಿಯಲ್ಲಿ ಒದರುತ್ತಿದ್ದರೆ, ಎಂತಹವನಿಗಾದರೂ ಮರಣ ಭಯ, ದೇವರಲ್ಲಿ ಭಕ್ತಿ, ಎಲ್ಲಾ ಒಟ್ಟಿಗೇ ಒಕ್ಕರಿಸಿಬಿಡುತ್ತೆ.

ಅಲ್ಲಾರೀ, ನಾನು ಕಣ್ಣುಮುಚ್ಚಿಕೊಂಡ ಮೇಲೆ ಯಾರ ಸಹಾಯಕ್ಕೆ ಹಣ ಒದಗಿದರೆಷ್ಟು ಬಿಟ್ಟರೆಷ್ಟು? ಅದಕ್ಕಾಗಿ ಬದುಕಿರುವಾಗ ಲಾಯರ ಗುಮಾಸ್ತೆಯ ಮೂರೂ ಮತ್ತೊಂದು ರೂಪಾಯಿ ಸಂಬಳದಲ್ಲಿ, ಮೊಟಕು ಹಾಕಿಕೊಳ್ಳ ಬೇಕೇ. ಆದರೂ ಜೀವವಿಮೆ ಮಾಡೋಕೆ ನನಗೇನೂ ಅಭ್ಯಂತರವಿರಲಿಲ್ಲ. premium ಮಾತ್ರ ಲಕ್ಷ್ಮೀಪುತ್ರರು ಯಾರಾದರೂ ನನ್ನ ಹೆಸರಲ್ಲಿ ಕಾಲಕ್ಕೆ ಸರಿಯಾಗಿ ಕಟ್ಟುತ್ತಿದ್ದರೆ, ಯಾರು ಬೇಡಾಂದ್ರು? ಆದರೆ, ಈ ಧರ್ಮಕಾರ್ಯ ಮಾಡೋಕೆ ಯಾರಾದರೂ ಮುಂದೆ ಬರಬೇಕಲ್ಲ! ನನ್ನ ಈ ಪೀಕಲಾಟ ಆ ವಿಮಾ ದೈತ್ಯರಿಗೆ ಅರ್ಥವಾಗಿ ನನ್ನನ್ನು ಪೀಡಿಸೋದು ನಿಲ್ಲಿಸಬೇಡವೆ? ಉಹುಂ. "ಸಾರ್ ಈ ಕಾಲದಲ್ಲಿ ಸರ್ಕಾರೀ ಕಚೇರಿಯ ಜವಾನರೂ ಕೂಡ 600 ರೂ. ವರೆಗೆ ವಿಮೆ ಮಾಡಿರುತ್ತಾರೆ ಸಾರ್. ಅವರ ಹೆಂಡಿರು ಮಕ್ಕಳ ಹಿತ ಅಷ್ಟರ ಮಟ್ಟಿಗಾದರೂ ಅವರ ದೃಷ್ಟಿಯಲ್ಲಿದೆ ಸಾರ್. ನೀವು ಇಷ್ಟರಲ್ಲೇ ಕಣ್ಣುಮುಚ್ಚಿ ಕೊಂಡರೆ ನಿಮ್ಮ ಇಬ್ಬರು ಹೆಂಡಿರ, ಅರ್ಧ ಡಜ಼ ಹೆಣ್ಣುಮಕ್ಕಳ, ಕಾಲು ಡಜ಼ ಗಂಡು ಮಕ್ಕಳ ಗತಿ ಏನಾಗಬೇಕು? ಯೋಚನೆ ಮಾಡಿ ಸಾರ್" ಅಂತ ತಿರುಗಿ, ಬಹಳ ಕಷ್ಟಪಟ್ಟು ಮರೆಯಲು ಅಭ್ಯಾಸ ಮಾಡುತ್ತಿದ್ದ ನನ್ನ ಸಂಸಾರ ತಾಪ ತ್ರಯಗಳನ್ನು ಕಣ್ಣುಮುಂದೆ ಚಿತ್ರಿಸಲು ಹೇಸುವುದಿಲ್ಲ ಈ ಪಾಪಿಗಳು.

ನನಗೆ ಎರಡು ಮದುವೆ, ನಿಜ. ಆ ಪಾಪಿ ಹೇಳಿದ ಹಾಗೆ ಮಕ್ಕಳಿದ್ದಾರೆ, ನಿಜ. ನಾನು ಬದುಕಿರೋತನಕ ಇವಕ್ಕೆ ಅರ್ಧ ಹೊಟ್ಟೆಯೋ, ಕಾಲು ಹೊಟ್ಟೆ ಯೋ, ತುಂಬೋ ಶಕ್ತಿ ದೇವರು ಕೊಟ್ಟಿದ್ದಾನೆ. ನಮ್ಮ ಲಾಯರ ಕಕ್ಷಿಗಾರರು ಕೊಡುತ್ತಾರೆ. ಇದೆಲ್ಲಾ ಇವನ್ಯಾಕೆ ತಲೇಗೆ ಹಚ್ಚಿಕೋ ಬೇಕು? ಈ ದೈತ್ಯರ

ಕಾಟ ಹೇಗಾದರೂ ತಪ್ಪಿಸಿಕೊಳ್ಳಬೇಕೂಂತ, ತಲೆ ಕೆರೆದು ಕಡೆಗೆ ಒಂದುಪಾಯ ಹುಡುಕಿದೆ. ಹೆಬ್ಬಿಗುಬ್ಬಾಲೆಯ ವಿಮಾ ಕಂಪೆನಿಯ ಅಪ್ಲಿಕೇಷನ್ ಫಾರಂನ್ನು ತಂದು, ಆ ಕಟುಕ ಕೇಳಿದ ಪ್ರಶ್ನೆಗಳಿಗೆ ಈ ರೀತಿ ಉತ್ತರಗಳನ್ನು ತುಂಬಿದೆ—

ಪ್ರ—ನಿಮ್ಮ ವಯಸ್ಸೆಷ್ಟು ?

ಉ -ಜ್ಞಾಪಕವಿಲ್ಲ. ೨೦-೫೦ ಇರಬಹುದು.

ಪ್ರ—ಎದೆಯ ಸುತ್ತಳೆ.

ಉ—೧೯ ಅಂಗಲಕ್ಕೆ ಸ್ವಲ್ಪ ಕಮ್ಮಿ.

ಪ್ರ—ಎದೆಯ ಉಬ್ಬರ.

ಉ—ಕಾಲು ಅಂಗುಲ ಸರಿಯಾಗಿ.

ಪ್ರ—ನಿಮ್ಮ ಎತ್ತರ.

ಉ—ನನ್ನ ಗೂನನ್ನು ನೆಟ್ಟಗೆ ಮಾಡಿಸಿ ಅಳೆಸಿದರೆ ಮೂರೂಕಾಲು ಅಡಿಗೆ ಒಂದು ಗೇಣು ಕಡಿಮೆ ಬರಬಹುದು.

ಪ್ರ—ನಿಮ್ಮ ತಾತಂದಿರು ಸತ್ತಿರುವರೇ ?

ಉ—ಓಹೋ, ಹೆಚ್ಚು ಕಡಿಮೆ.

ಪ್ರ—ಸತ್ತಿದ್ದರೆ (ಕ್ಷಮಿಸಿ) ಯಾವ ರೋಗದಿಂದ ?

ಉ—ಸತ್ತಿದ್ದರೆ (ಕ್ಷಮಿಸಿದೆ) ಕುಡಿತದಿಂದ.

ಪ್ರ—ತಂದೆಯವರು ಸತ್ತಿದ್ದಾರೆಯೇ ?

ಉ—ನಿಮ್ಮ ಪಾಲಿಗೆ.

ಪ್ರ—ಕಾರಣ ?

ಉ—ಹುಚ್ಚುನಾಯಿ ಕಡಿದು.

ಪ್ರ—ನಿಮ್ಮ ತಂದೆಯ ವಾಸಸ್ಥಳ ?

ಉ—ಹುಚ್ಚಾಸ್ಪತ್ರೆ.

ಪ್ರ—ನೀವು ಯಾವುದಾದರೂ ಖಾಯಿಲೆಯಿಂದ ನರಳಿದ್ದೀರಾ ?

ಉ—ಓಹೋ ಅದಕ್ಕೇನು ಪಂಚ! ಹುಟ್ಟಿದಾಗ ಬಾಲಗ್ರಹ, ಅನಂತರ ಪಾರ್ಶ್ವವಾಯು, ವಯಸ್ಸಾದ ಮೇಲೆ ತೊನ್ನು, ಕೀಲುಗಳಲ್ಲಿ ನೀರೂರುವುದು, ಈಗ ಹೊಸದಾಗಿ ನಾಯಿಕೆಮ್ಮಲು, ಉದರ ಶೂಲೆ, ಡ್ರಾಪ್ಸಿ ಇತ್ಯಾದಿ.

ಪ್ರ—ತಮ್ಮ ಆಯಸ್ಸನ್ನು ಮೊಟಕು ಮಾಡಬಹುದಾದ ದುರಭ್ಯಾಸಗಳಿವೆಯೋ?

ಉ—ಇವೆ, ಹೇರಳವಾಗಿ. ಹೆಂಡ, ಚುಟ್ಟ, ಅಫೀಮು, ಇತ್ಯಾದಿ. ಇವಲ್ಲದೆ ನನಗೆ ಅಂಟುವಾಳದಕಾಯಿ ಅಂದರೆ ಪ್ರಾಣ. ವ್ಯಾಯಾಮ ಮೈಗಾಗೋಲ್ಲ.

ಇನ್ನೂ ಇದೇ ಶೈಲಿಯಲ್ಲಿ ಉತ್ತರ ಗೀಚಿ, ಹೆಬ್ಬಿಗುಬ್ಬಾಲಿ ವಿಮಾ ಕಂಪೆನಿಗೆ ತಿರುವಾಂಕೂರು ಕ್ವಿಲಾನ್ ಬ್ಯಾಂಕಿಗೆ ಆದ ಗತಿಯೇ ಆಗಲೆಂದು ಹಾರೈಸಿ ಈ ವಿಷಯದಲ್ಲಿ ದೇವರಿಗೆ ಮೊರೆಯಿಡುವುದಾಗಿ promise ಮಾಡಿ ವಾಪ್ಸುಬರುತ್ತೇ ಅನ್ನೋ ಧೈರ್ಯದ ಮೇಲೆ ಅಪ್ಲಿಕೇಷನ್ ಫಾರಂ ಜತೇಲಿ ಎರಡು ರೂಪಾಯಿ ಕಂತು ಕಳುಹಿಸಿದೆ. ಕೊಂಚ ದಿನಗಳಾದ ಮೇಲೆ ಕಂಪೆನಿಯ ಮ್ಯಾನೇಜರಿಂದ (ಅವರ ಮನೆ ಹಾಳಾಗ) ಈ ರೀತಿ ಉತ್ತರ ಬಂತು.

“ಸ್ವಾಮಿ, ನೀವು ದಯೆಯಿಟ್ಟು ಕಳುಹಿಸಿದ ಪಾಲಿಸಿಯು ಹಣವೂ ಬಂದು ತಲಪಿದವು. ತಮ್ಮ ದೇಹಸ್ಥಿತಿಯ ವಿವರಣೆಯನ್ನು ನಮ್ಮ ಇತರ ಪಾಲಿಸಿದಾರರ ಸ್ಥಿತಿಯ ಸರಾಸರಿಗೆ ಹೋಲಿಸಿ ನೋಡಿ, ನಿಮ್ಮ ಪಾಲಿಸಿಯನ್ನು ಯಾವ ವಿಧವಾದ ಭಯವೂ ಇಲ್ಲದೆ ಪ್ರಥಮ ದರ್ಜೆಯ ರಿಸ್ಕ್ ಆಗಿ ಒಪ್ಪಿಕೊಂಡಿದ್ದೇವೆ........

ಹೀಗೂ ಉಂಟೇ, ಸ್ವಾಮಿ? ಹೋಗಲಿ ಬಿಡಿ, ಕಕ್ಷಿಗಾರ ವೆಂಕಟಸಾಮಿಗೆ ಎರಡು ರೂಪಾಯಿ ಚೊಕ್ಕಟ, ಅಷ್ಟೇ ತಾನೇ?

—ದೇಶಿರಾಜ.





"ಆತ ನನ್ಗೆ ಇಪ್ಪತ್ರೂಪಾಯಿ ಕೊಡ್ಬೇಕಾದ್ದಿದೆ."

# ನಕ್ಷತ್ರಗಳು

"ದಿಟ ಅಂದರೆ, ಅವರು ಹೇಳೋದು"

"ಯಾರೇ. ಏನನ್ನೇ ಹೇಳೋದು"

"ವಾರ ಭವಿಷ್ಯ ಬರೆಯೋರು ಹೇಳೋದು. ನಕ್ಷತ್ರಗಳನ್ನ ಗುಣಾಕಾರ ಮಾಡಿ, ಭಾಗಾಕಾರಮಾಡಿ ಬರೆಯುತ್ತಾರಲ್ಲ, ಅದೆಲ್ಲಾ ದಿಟ ಅಂದ್ರೆ."

"ಇದು ಯಾಕೆ ಈ ಬುದ್ಧಿ ಈಗ ನಿನಗೆ. ಮೊನ್ನೆ ತಾನೆ ಹೇಳುತ್ತಾ ಇದ್ದೆ, ಎಲ್ಲೋ ಇರೋ ನಕ್ಷತ್ರ ನಮ್ಮನ್ನೇನು ಮಾಡುತ್ತೆ ಅಂತ."

"ಇಲ್ಲಾ ನೋಡಿ. ಆ ವ್ಯಾಪ್ಯಾಣ್ಯಾಗ್ಯಾರ್ ಬರೆದಿರುವುದು ದಿಟವಾಗಿ ಬಿಡುತು. ಆ ವಾರಪತ್ರಿಕೆಯಲ್ಲಿ, ಮೇಷರಾಶಿಯವರಿಗೆ ಈ ವಾರ ಅಡಿಗೆಯ ಧ್ಯಾಂದಲೇ ಇರಲಿಕ್ಕೆಬೇಕು, ಸೌಟು ವಿಚಾರದಲ್ಲಿ ಜಾಗರೂಕರಾಗಿರಿ ಎಂದು ಬರೆದಿತ್ತು. ಸಮಾಜದಲ್ಲಿದ್ದ ಪತ್ರಿಕೆಯನ್ನು ಮನೆಗೆ ತಂದು ನೋಡಿದೆ. ಇವತ್ತು ಸಮಾಜಕ್ಕೆ ಹೋದಾಗ ಆ ಮಿಟುಕಲಾಡಿ ವೆಂಕಮ್ಮ ಬಂದಿದ್ದಳು. ಏಳು ಮಕ್ಕಳ ತಾಯಿಯಾದಾಕ್ಷಣ ಏಳು ಬಗೆ ಅಡಿಗೆ ಮಾಡುವುದಕ್ಕೆ ಬರುತ್ತದೆಯೋ, ಆದರೂ ಹೀಗೆ ಅಡಿಗೆ ಮಾಡಬೇಕು, ಹಾಗೆ ಒಗ್ಗರಣೆ ಹಾಕಬೇಕು ಎಂದು ಜೋರು ಮಾಡುವುದಕ್ಕೆ ಆರಂಭಿಸಿದಳು. "ಬಿಡಿ ವೆಂಕಮ್ಮನೋರೆ, ಯಾವ ಹುಡುಗಿ ಕೂಡ ಏನು ಅಡಿಗೆ ಮಾಡಬೇಕೆಂದರೂ ಮಾಡುತ್ತಾಳೆ" ಎಂದೆ. ಹಾಗಾದರೆ, ಅವ್ವಿಯಲ್ ಮಾಡಿ ನಿಮ್ಮನೆಯಲ್ಲಿ ನಮ್ಮನ್ನ ಊಟಕ್ಕೆ ಕರಿ ಎಂದಳು. "ಏನು ಮಹಾ" ಎಂದು ಈವತ್ತು ಅವರನ್ನೆಲ್ಲಾ ಊಟಕ್ಕೆ ಕರೆದಿದ್ದೆ. ನೀವು ಕಛೇರಿಗೆ ಹೋದ ಕೂಡಲೆ, ಅವ್ವಿಯಲ್ ಮಾಡಲು ಶುರುಮಾಡಿದೆ. ಮೊದಲು ತುರುಬು ತಮಿಳಿನವರಂತೆ ಒಂದು ಪಕ್ಕಕ್ಕೆ ಗಂಟು ಕಟ್ಟಿದೆ. ಎಲೆಯಡಿಕೆಯನ್ನು ಒಂದು ದವಡೆಯಲ್ಲಿ ವತ್ತರಿಸಿಟ್ಟುಕೊಂಡೆ. ಕಡೆಗೆ ಸೀರೆಯನ್ನೂ ಅವರಂತೆಯೇ ಉಟ್ಟು ಕೊಂಡು ಅಡಿಗೆಗೆ ಶುರುಮಾಡಿದೆ. ಎರಡು ಮೂರು ತರಕಾರಿ ಎಲ್ಲಾ ಉದ್ದುದ್ದ ವಾಗಿ ಹೆಚ್ಚಿದೆ. ಗೋರಿಕಾಯಿ, ಬಾಳೇಕಾಯಿ, ಇತ್ಯಾದಿ ತಿಥಿ ತರಕಾರಿಗಳನ್ನೇ ಹೆಚ್ಚಿದೆ. ವಡವಡ ಎಂದು ಸೌಟನಿಂದ ಪಾತ್ರೆಯಲ್ಲಿ ಶಬ್ಧಮಾಡುತ್ತ ಅವಿಯಲ್ಲಿಗೆ ಆರಂಭಮಾಡಿದೆ. ಈ ಹಿನ್ನೆಲೆಯ ಸಂಗೀತ, ರೂಪು, ವೇಷ, ಕಾಯಿಪಲ್ಯ ಎಲ್ಲಾ ಸರಿಹೋದಾಗ ಇನ್ನು ಅವಿಯಲ್ ಹೇಗೆ ಕೆಡುತ್ತೆ ಎಂದು ಧೈರ್ಯಮಾಡಿ ಅಡಿಗೆ ಮಾಡಿದೆ. ವೆಂಕಮ್ಮ ಪರಿವಾರ ಒಂದು ಗಂಟೆಗೆ ಬಂದರು. ಅವಿಯಲ್ ಬಡಿಸಿದರೆ

ಬಿದ್ದು ಬಿದ್ದು ನಗಲಾರಂಭಿಸಿದರು. ಇದೇನಿದು? ಜೀವತ್ ಪಿತೃಗಳಿಗೇ ಹೀಗೆ ಅಡಿಗೆ ಮಾಡಿದ್ದೀರಾ ಎಂದರು. ನಿಮ್ಮ ಯಜಮಾನರಿಗೆ ಇದನ್ನು ಬಡಿಸಲಿಲ್ಲವೇ ಎಂದರು. ಹಾಗೆ ಬಡಿಸಿದ್ದಾದರೆ, ಅವರು ಕಛೇರಿಯಿಂದ ಹಿಂದಿರುಗುವ ಹೊತ್ತಿಗೆ ನೀವು ತೌರುಮನೆ ಸೇರಿಕೊಳ್ಳಿ ಎಂದರು. ಇನ್ನೂ ಏನೇನೋ ಆಡಿಕೊಂಡು ನಕ್ಕರು. ದಿಟ ಅಂದರೆ ಈ ವಾರಭವಿಷ್ಯ. ಮೇಷ ರಾಶಿಯವರಿಗೆ ಈ ವಾರದಲ್ಲಿ ಅಡಿಗೆಯ ವಿಚಾರದಲ್ಲಿ ದಾಂಧಲೆ ಇರಲಿಕ್ಕೇ ಆಯ್ತು. ಅಲ್ಲದೆ, ಬಡಿಸುಕ್ಕೆ ಹೋದಾಗ ಸೌಟು ಕೂಡಾ ಜಾರಿಬಿತ್ತು ಅದೂ ವೆಂಕಮ್ಮನೆದುರಿಗೆ. ಆಕೆ ಅದನ್ನೇ ಹಿಡಿದುಕೊಂಡು ತಿರುಗ ಮುರುಗ ನೋಡಹತ್ತಿದರು. "ಯಾಕೆ ಹಾಗೆ ನೋಡು ತ್ತೀರಿ" ಎಂದೆ. ನಿಮ್ಮ ಯಜಮಾನರು ಇದನ್ನೇ ನಿಮ್ಮ ಕೈಯಿಂದ ಕಿತ್ತುಕೊಂಡು ನಿಮಗೆರಡು ಕೊಟ್ಟಿದ್ದರೆ ಇದರಲ್ಲಿ ಕಚ್ಚು ಬೀಳುತ್ತಿತ್ತು. ಅದೇನಾದರೂ ಇದೆಯೇ ಎಂದು ನೋಡಿದೆ ಎಂದರು.—ಮುಖ್ಯ, ದಿಟ ಅಂದರೆ.''

* * *

ರಾತ್ರಿ ಊಟಮಾಡುವಾಗ ಈ ಸರಸ ಸಂಭಾಷಣೆ ನಡೆಯಿತು. ಹಾಗೆಯೇ ಊಟಮಾಡಿ ಹಜಾರದಲ್ಲಿ ಕುಳಿತಾಗ ಆ ವಾರಪತ್ರಿಕೆಯು ನನ್ನ ಕಣ್ಣಿಗೆ ಬಿತ್ತು. ಹಾಗೆಯೇ ನೋಡಿದೆ. ವಾರಭವಿಷ್ಯದ ಪುಟವನ್ನು ತೆಗೆದೆ. ಮಿಕ್ಕ ಪುಟಗಳೆಲ್ಲಾ ಶುಭ್ರವಾಗಿದ್ದು, ಈ ಪುಟ ಮಾತ್ರ ಕೈಯಾಡಿಸಲ್ಪಟ್ಟಿತ್ತೆಂದು ಸುಲಭವಾಗಿ ತಿಳಿಯಿತು. ಪತ್ರಿಕೆಯನ್ನು ತೆರೆದರೆ ಆದೇ ಪುಟ ಅದರಷ್ಟಕ್ಕೆ ಅದೇ ಎದುರಾಗುತ್ತಿತ್ತು. ನನ್ನ ಲಗ್ನ ಕನ್ಯಾ ನೀವು ಅನ್ನಬಹುದು, ನನಗೂ ಅದೇ ಎಂದು. ಆದರೆ, ಇದೇ ಫಲ ನಿಮಗೂ ಅನ್ನಿ. ಭವಿಷ್ಯ ನೋಡಿದೆ.

ಈ ವಾರ ವ್ಯಾಪಾರದಲ್ಲಿ ಕೇಡು. ಆದರೆ, ಆರೋಗ್ಯಕ್ಕೆ ಅನುಕೂಲ. ಮಿತ್ರರಿಂದ ದ್ರೋಹದ ಭಯವುಂಟು ಎಚ್ಚರಿಕೆ.

ಮಾರನೆಯ ದಿನ ನಾನು ರೇಷನ್ ಅಂಗಡಿಗೆ ಹೋಗಿ ವಾರದ ಸಾಮಾನು ತರಬೇಕಿತ್ತು. ಇದರಿಂದ ನನಗೆ ಇಲ್ಲಿನತನಕ ಏನೂ ಕಷ್ಟವಾಗಿತ್ತಿಲ್ಲ. ಏಕೆಂದರೆ ಡಿಪೋ ಅಧಿಕಾರಿ ನನ್ನ ಹಳೆಯ ಸ್ನೇಹಿತ. ಇದು ಓದ್ದ ಮೇಲೆ ನನಗೆ ಸಂಶಯ. ನಾಳೆ ಈ ಮಿತ್ರ ಏನು ದ್ರೋಹ ಮಾಡುತ್ತಾನೋ, ವ್ಯಾಪಾರದಲ್ಲಿ ಏನು ಮೋಸ ಆಗುತ್ತದೋ, ಆರೋಗ್ಯಕ್ಕೆ ಅನುಕೂಲ ಅಂದರೆ, ಮಿತ್ರ ಮಾರಿದ ಸಾಮಾನಿನಲ್ಲಿ ವಿಷ ಇಡಲಿಕ್ಕಿಲ್ಲ. ಹಾಗಿದ್ದರೂ ವಿಷಕಂಠನಾಗುವನೇ ವಿನಹಾ ವಿಷ ಉದರ ನಾಗುವುದಿಲ್ಲ. ಇರಲಿ ನೋಡೋಣ ಎಂದು ಮಲಗಿದೆ. ಬೆಳಿಗ್ಗೆ ಎದ್ದರೂ ಈ ವಿಷಯ ಮರೆಯುವುದಕ್ಕಾಗಲಿಲ್ಲ. ಬೆಳಿಗ್ಗೆ ಚೀಲ ಮೂಟೆ ಹೊತ್ತುಕೊಂಡು ಡಿಪೋಗೆ ಹೋದೆ. ಗಲಾಟೆಯಾದರೂ ಅಧಿಕಾರಿಯು ಅತಿವಿನಯವಾದ ಮಾತ ನಾಡಿಸಿ ಕಾರ್ಡು ತೆಗೆದುಕೊಂಡು ಗುರ್ತುಹಾಕಿ ೪ ರೂಪಾಯಿ ಅಕ್ಕಿ, ಹದಿನಾರು ಸೇರು ಎಂದು ಚೀಲಕ್ಕೆ ಅಕ್ಕಿ ತುಂಬಿಸಿದ. ನನಗೆ ಅನುಮಾನ. ಈ ಅರಬರ